# ವಸಂತ ಗ್ರಂಥಮಾಲಾ

೨

# ಸಂಧ್ಯಾಕಾಲ



ಶ್ರೀರಂಗ

ಸಂಪಾದಕರು
...ಸ್ವರಾಯ. ಮ. ನ. ಮೂರ್ತಿ.

ಪ್ರಾತರ್—ಮಧ್ಯಾಹ್ನ—ಸಾಯಂ ಎಂಬ

ಮೂರು ಅಂಕಗಳನ್ನೊಳಗೊಂಡ



# ಸಂಧ್ಯಾಕಾಲ

ಶ್ರೀರಂಗ

ವಸಂತ ಗ್ರಂಥಮಾಲಾ

೬೩, ಗಾಂಧಿನಗರ, ಬೆಂಗಳೂರು

೧೯೪೩ ]                    [ ಬೆಲೆ ೧-೦-೦

**ಸಲಹೆಗಾರ ಮಂಡಳಿ**

ಶ್ರೀ. ಸಿ. ಕೆ. ವೆಂಕಟರಾಮಯ್ಯ, ಎಂ. ಎ., ಎಲ್. ಎಲ್. ಬಿ.
ಪ್ರೊ. ರಂ. ವಾ. ಜಾಗಿರದಾರ, ಎಂ. ಎ. (ಲಂಡನ್)
ಪ್ರೊ. ಕೆ. ಜಿ. ಕುಂದಣಗಾರ, ಎಂ. ಎ.
ಶ್ರೀ. ಸಿ. ಎಫ್. ಅಂಗಡಿ
ಪ್ರೊ. ಪಡಕೋಣೆ ರಮಾನಂದ, ಬಿ. ಎ., ಎಲ್. ಟಿ.



**ಮುದ್ರಕರು**
**ಶೇ**ಷೊ ಗೋವಿಂದ ಕುಲಕರ್ಣಿ
ಸಾಧನಾ ಪ್ರೆಸ್
ಧಾರವಾಡ

**ಪ್ರಕಾಶಕರು**
ಅ. ನ. ಕೃಷ್ಣರಾಯ
ಮ. ನ. ಮೂರ್ತಿ
ವಸಂತ ಗ್ರಂಥಮಾಲಾ, ಬೆಂಗಳೂರ

# ನಮ್ಮ ಮಾತು

ಕನ್ನಡ ಕುಲರಸಿಕರಿಗೆ ಶ್ರೀರಂಗರ ಹೆಸರು ಸುಪರಿಚಿತ. ಅವರ ನಾಟಕ, ಲೇಖನಗಳನ್ನೋದಿ, ಭಾಷಣಗಳನ್ನು ಕೇಳಿ ಕನ್ನಡಜನ ತಣಿದಿದ್ದಾರೆ. ಅವರ ಭಾವ, ವಿಚಾರಗಳಲ್ಲಿ ಮಿಂಚುವ ಸಳೆಮಿಂಚಿನ ಹೊಳಪಿಗೆ ಕಣ್ಮುಚ್ಚಿರುವರೂ ಉಂಟು; ಕನ್ನಡದೇಶದ ಹೊಸ ಸಾಹಿತ್ಯದಲ್ಲಿ ಶ್ರೀರಂಗರದೇ ಒಂದು ಹೆಜ್ಜೆ, ಒಂದು ನೋಟ, ಒಂದು ದಾರಿ. ಅವರ ಜಾಣ್ಮೆ, ವಿಚಾರಧೋರಣೆ, ಧೀಃ– ನೋಟ ಅವರ ನಾಟಕಗಳಲ್ಲಿ ವಿಶೇಷವಾಗಿ ಕಂಡುಬರುತ್ತದೆ. ನಾಟಕದ ಸಾಧನವನ್ನು ಅವರು ಧಾರಾಳವಾಗಿಯೂ, ಕುಶಲವಾಗಿಯೂ ಬಳಸಿಕೊಂಡಿದ್ದಾರೆ.

'ಸಂಧ್ಯಾಕಾಲ' ಶ್ರೀರಂಗರ ನಾಟಕದಲ್ಲಿ ಉತ್ತಮ ವರ್ಗಕ್ಕೆ ಸೇರುತ್ತದೆ. ಇದರಲ್ಲಿ ಬ್ರಾಹ್ಮಣ್ಯದ ಹಿರಿಮೆಯನ್ನು ಪ್ರಶ್ನಿಸಿರುವುದಲ್ಲದೆ ಅದರ ಮೂಢರೂಢಿಯಾಚಾರದ ಪೊಳ್ಳನ್ನು ಮಾರ್ಮಿಕವಾಗಿಯೂ, ಹಾಸ್ಯ ರಸಭರಿತವಾಗಿಯೂ ತೋರಿಸಿದ್ದಾರೆ. ತಂತ್ರಸೃಷ್ಟಿಯಿಂದ 'ಸಂಧ್ಯಾಕಾಲ'ಕ್ಕೆ ಹಿರಿಯ ಸ್ಥಾನ ಸಲ್ಲುತ್ತದೆ.

ನಮ್ಮ ಗ್ರಂಥಮಾಲೆಯ ಆಶ್ರಯದಲ್ಲಿ ತಮ್ಮ ನಾಟಕ ಪ್ರಕಟವಾಗಲು ಸ್ನೇಹ–ವಿಶ್ವಾಸಗಳಿಂದ ಸಮ್ಮತಿಸಿದ ಶ್ರೀರಂಗರಿಗೆ ನಾವು ಕೃತಜ್ಞರು.

ಬೆಂಗಳೂರ

ಪ್ರಕಾಶಕರು

# ಅರಿಕೆ

ಈ ನಾಟಕದ ಹೆಸರಿನ ವಿಷಯವಾಗಿ ಒಂದೆರಡು ಮಾತುಗಳನ್ನು ಹೇಳುವುದೊಂದೆ ಈ 'ಅರಿಕೆ'ಯ ಉದ್ದೇಶವಾಗಿದೆ. ಸುಮಾರು ೨ ವರ್ಷಗಳಿಗೆ ಮುಂಚಿತ ಈ ನಾಟಕವನ್ನು ಬರೆದದ್ದು. ಅಲ್ಲಿಯವರೆಗೆ ಬರೆದ ನಾಟಕಕ್ಕಿಂತ ಇದಾವದೊ ತೆರನಾಗಿ ಬೇರೆ ಎನಿಸಿತು ನನಗೆ—ಬರೆಯುವ ಮುಂಚೆ. ಸಂವಿಧಾನಕ (technique) ದಲ್ಲಿ ಇದು ಮಿಕ್ಕ ನನ್ನ ಒಂದೂ ನಾಟಕದಂತೆ ಇಲ್ಲ ಎಂದು ಕೆಲ ಗೆಳೆಯರು ಅಭಿಪ್ರಾಯ ಪಟ್ಟರು— ಬರೆದ ತರುವಾಯ. ಆದರೆ ನನಗೆ ಹೊಳೆದದ್ದು ಬೇರೆ ವಿಷಯವೆ. ಈ ನಾಟಕ ಬರೆಯುವಾಗಲೆ 'ಗೀತಾಗಾಂಭೀರ್ಯ'ದ ಬರೆವಣಿಗೆಗೆ ಪ್ರಾರಂಭವಾಗಿತ್ತು. ಅಂದಿನಿಂದ ಇಂದಿನವರೆಗೆ ಸುಮಾರು ೨ ವರ್ಷಕ್ಕೆ ತುಸು ಹೆಚ್ಚಿನ ಅವಧಿಯಲ್ಲಿ ಒಂದೂ ದೊಡ್ಡ ನಾಟಕವನ್ನು ಬರೆಯಲಪೇಕ್ಷಿಸಿಲ್ಲ. ಈ ವಿಚಾರಕ್ಕಾಗಿಯೆ ನಾಟಕ ಬರೆಯುವ ಮುಂಚೆಯೆ ನನಗೆ 'ಸಂಧ್ಯಾಕಾಲ' ಎಂಬ ಹೆಸರು ಸೂಚಿತವಾಗಿದ್ದಿತೆ? ನನ್ನ ಬರೆವಣಿಗೆಗೆ ಇದು ಸಂಧ್ಯಾಕಾಲವೆ? ಎಂದು ಅಂದಿನಿಂದ ಇಂದಿಗೆ ನನ್ನ ಸಂದೇಹ. ಬರೆಯುವ ಶಕ್ತಿ ಇದೆ, ಉತ್ಸಾಹವೂ ಇದೆ ಎಂದು ನನಗೆನಿಸಿದರೂ ಇನ್ನು ನಾಟಕಗಳನ್ನು ನಾನು ಬರೆಯಬಲ್ಲೆನೆ—ಎಂದು ನನಗೆಯೆ ಪ್ರಶ್ನೆ. ಶೈಲಿಯ ಸಂಧ್ಯಾಕಾಲ (transition) ವಲ್ಲ, ವಿಚಾರಗಳ ಸಂಧ್ಯಾಕಾಲ ಎಂದು ತೋರಹತ್ತಿದ್ದರಿಂದ ತನ್ನ ನಾಟ್ಯಸೂರ್ಯನು ಅಸ್ತವಾಗಬಹುದಾಗಿದೆ ಎಂಬ ಅಂತರಂಗದ ಹೂಬಿಸಿಲಿನಲ್ಲಿ ಬೀಳ್ಕೊಡ ಬಯಸುವ

ಶ್ರೀರಂಗ

**ಹಿಂದುಸ್ತಾನದಲ್ಲಿರಬಹುದಾದ**

ಹದಿನಾರುಸಾವಿರ ಜಾತಿಗಳಿಗೆ

ಸಮರ್ಪಿತವಾಗಿದೆ

ಕನ್ನಡ-ನಾಟ್ಯ-ವಿಲಾಸಿಗಳು ಈ ನಾಟಕದ ಮೊದಲ ಪ್ರಯೋಗವನ್ನು ಧಾರವಾಡದಲ್ಲಿ ತಾ. ೮-೧೨-೧೯೩೯ ನೆಯ ದಿನ ಆಡಿ ತೋರಿಸಿದರು. ಮೊದಲ ಪ್ರಯೋಗದ ನಟವರ್ಗ ಕೆಳಗಿನಂತಿದ್ದಿತು: ಕೊನೆಯ ಅಂಕದಲ್ಲಿ 'ಶಾಲಾಶಿಕ್ಷಕ' ಎಂಬ ಒಂದು ಪಾತ್ರ (ಅಭಿನಯಿಸಿದವರು ಶ್ರೀ. ಮಳಿಯೆ ಗೋವರ್ಧನರಾಯರು) ಇದ್ದಿತು. ತರುವಾಯದ ಪ್ರಯೋಗಗಳಲ್ಲಿ ಆ ಪಾತ್ರವನ್ನು ತೆಗೆದು ಅಂಕದ ಆ ಭಾಗವನ್ನು ಬೇರೆಯಾಗಿಯೆ ಬರೆಯಲಾಗಿದೆ.—

**ಗ್ರಂಥಕರ್ತ**

| | | | |
|---|---|---|---|
| **ಮುದುಕ** | .... | ಶ್ರೀ. | ಜಿ. ವಿ. ಸೊಳ್ಳೆಗಟ್ಟಿ |
| **ಹೆಂಗಸು** | . | ,, | ಎಮ್. ಎಸ್. ಕುಲಕರ್ಣಿ |
| **ಪುಟ್ಟು** | ... | ,, | ಎಸ್. ಎಸ್. ಕಣಬರ್ಗಿಮಠ |
| **ಧರೆಪ್ಪ** | . | ,, | ಎಚ್. ಎಸ್. ಪಾಟೀಲ |
| **ಕುಲಕರ್ಣಿ ವೆಂಕಪ್ಪ** | .. | | ಶ್ರೀರಂಗ |
| **ಪೋಸ್ಟಮನ್** | ... | ,, | ಕೆ. ಜಿ. ಹಲಸಗಿ |
| **ದಾಸಯ್ಯ** | . | ,, | ನೆಗಳೂರ ರಂಗನಾಥ |

**ಎಚ್ಚರಿಕೆ:**—ಶ್ರೀರಂಗರ ಸಮ್ಮತಿಯನ್ನು ಪಡೆಯದೆ ನಾಟಕವನ್ನು ಆಡಿ ತೋರಿಸಲು ಯಾರಿಗೂ ಅಧಿಕಾರವಿಲ್ಲ.

# ಸಂಧ್ಯಾಕಾಲ

## 'ಪ್ರಾತರ್' ಎಂಬ ಮೊದಲನೆಯ ಅಂಕ

[ ಬೆಳಗಿನ ಏಳು ಗಂಟೆಯ ಸಮಯ. ತೆರೆಯು ಮೇಲೆದ್ದಾಗ ಹಿಂದಿನಿಂದ ಬೀಸೂಕಲ್ಲಿನ ಸಪ್ಪಳ, ಕೂಡಲೆ ರಾಗವಾಗಿ ಹಾಡುವ ದನಿ ಕೇಳಬರುವುದು. ನಮಗೆ ಕಾಣುವ ಈ ಕೋಣೆಯಲ್ಲಿ ಸದ್ಯಕ್ಕೆ ಯಾರೂ ಇಲ್ಲ. ಹೆಚ್ಚಾಗಿ ಸಾಮಾನು ಕೂಡ ಕಾಣುವುದಿಲ್ಲ. (ಪ್ರೇಕ್ಷಕರ) ಎಡಬದಿಯ ಮೂಲೆಗೆ ಒಂದೆರಡು ಕುರ್ಚಿಗಳು, ಒಂದು ಸಣ್ಣ ಮೇಜು, ಆ ಮೇಜಿನ ಮೇಲೆ ವೃತ್ತಪತ್ರಗಳು, ಒಂದು ಗಡಿಯಾರ ( time-pice )— ಇಷ್ಟಿದೆ. ಬೀಸುವ ಮತ್ತು ಹಾಡುವ ಸದ್ದು ಜೋರಾಗಿ ಕೇಳಬರುವುದು. ಇಷ್ಟರಲ್ಲಿ ಎಡಬದಿಯಿಂದ ಹೊರಕೋಣೆಗಳಿಗೆ ಹೋಗುವ ಬಾಗಿಲಿನಿಂದ ಸುಮಾರು ೪೦-೪೫ ವಯಸ್ಸಿನ ಹೆಣ್ಣುಮಗಳೊಬ್ಬಾಕೆ ಬಂದು ಗಡಿಯಾರವನ್ನು ನೋಡಿ, ಸಮೀಪ ನಡೆದು ಬಂದು ಗಡಿಯಾರವನ್ನು ಅಲ್ಲಾಡಿಸಿ ಕಿವಿಗೊಟ್ಟು, ಅದನ್ನು ಮತ್ತೆ ಹಾಗೆಯೆ ಇಟ್ಟು ಬಂದಬಾಗಿಲಿನಿಂದ ಹೋಗುವಳು. ಇದೆಲ್ಲ ನಡೆದಾಗ ಕೆಳಗಿನ ಹಾಡು ಕ್ರಮೇಣ ಜೋರು-ಜೋರಾಗಿ ಕೇಳಬರುವುದು.

**'ಹಸುವು ಕೊಟ್ಟಿಗೆಯೊಳಗ ಶಿಸುವು ತೊಟ್ಟಿಲದೊಳಗ ।**
**ವಾರೀಗಿ ರಾಯ ಒಳಹೊರಗ, ಇದ್ದsರ ।**
**ಹಸಿವಿ ನೀರಡಿಕಿ ನನಗಿಲ್ಲ' ॥**

ಇಷ್ಟರಲ್ಲಿ ಬಲಬದಿಯ ಬಾಗಿಲಿನಿಂದ ಏನನ್ನೊ ವಟಗುಟ್ಟುತ್ತ ಕೈಯಿಂದ ನೀರು ಸಿಂಪಡಿಸುತ್ತ ಮಡಿಯಲ್ಲಿದ್ದ ಮುದುಕನೊಬ್ಬನು ಬರುವನು. ಬಂದವನೆ ಸಿಟ್ಟಿನಿಂದ ಅತ್ತಿತ್ತ ನೋಡುವನು. ಹಾಡಿನ ಸದ್ದಿನಿಂದ ತನಗೆ ತ್ರಾಸವಾಗಿದೆಯೆಂಬುದನ್ನು ತೋರಿಸುವನು. ಇಷ್ಟರಲ್ಲಿ ಕೆಳಗಿನ ನುಡಿ ಪ್ರಾರಂಭವಾಗಲು ಹಲ್ಲು ಕಚ್ಚಿ ಮಂತ್ರವನ್ನು ವಟಗುಟ್ಟುತ್ತ ಬಂದ ಬಾಗಿಲಿನಿಂದ ಒಳಕ್ಕೆ ಹೋಗುವನು.

**'ಇದ್ದ ಹೆಂಡತಿ ಬಿಟ್ಟು ಕದ್ದು ಸೂಳೆಯ ಮಾಡಿ ।**
**ಬಿದ್ದು ಮೊಳಕಾಲ ಒಡಕೊಂಡ, ಮನೆರಾಯ ।**
**ಇದ್ದಷ್ಟು ಮಾನ ಕಳಕೊಂಡ' ॥**

ಬೀಸುವುದು ಮುಗಿಯುವಾಗ ಬೀಸೂಕಲ್ಲಿನ ಸದ್ದೂ ಹಾಡುವ ಸದ್ದೂ ಇನ್ನೂ ಜೋರಾಗಿ ಕೇಳಬರುವುದು.

**'ದೇವರ ಮನೆಯೊಳಗ ದೇವೇಂದ್ರ ಮಲಗ್ಯಾನ ।**
**ಏನಂತ ಅವನ ಎಬ್ಬಿಸಲಿ? ತಮ್ಮಯ್ಯ ।**
**ಮಾದೇವ ಏಳೊ ಮಗಳರಸಾ!' ॥**

ಇಷ್ಟರಲ್ಲಿ ಮುದುಕನು ಮತ್ತೆ ಬರುವನು. ಅವನ ಮುಖದಲ್ಲಿ ದರ್ಪದ, ಸಿಟ್ಟಿನ ಉಗ್ರ ಕಳೆಯೇರಿದೆ. ಬಂದವನೆ ಎದುರಿನ ಬಾಗಿಲನ ವರೆಗೆ ವಟಗುಟ್ಟುತ್ತ ನಡೆದು—]

**ಮುದುಕ:**— (ಗದ್ದರಿಸುತ್ತ) ಏ–ಏನೆ–ಏ— (ತಡೆದು) ಕೇಳಿಸತೊ ಇಲ್ಲೋ?— ಆಂ?— ಪೆನಶನ್ ತಕ್ಕೊಂಡವ ನಾ ಆದರೆ ಮುದುಕಿ ನೀ ಆದೆಯೊ ಏನೊ ಅಂತೀನಿ! ಎಲ್ಲಿದ್ದೀಯೆ!

**ಹೆಂಗಸು:**— (ಎಡಬಾಗಿಲಿನಿಂದ ಬಂದು ಸಮಾಧಾನದ ದನಿಯಲ್ಲಿ) ಏನದು–ಏನದು? ಇಲ್ಲೇ ಇದ್ದೇನಿ. ನೀವು ಸಂಧ್ಯಾನ ಮಾಡತಾ ಕೂತೀರಿ, ನಿಮಗ ಯಾಕ ತ್ರಾಸ ಅಂತ ನಾ ಹೊರಗಿನ ಪಡಸಾಲೆಯೊಳಗ ಪಲ್ಲೆ ಆರಿಸತಾ ಕೂತಿದ್ದೆ.

**ಮುದುಕ:**— (ಆಶ್ಚರ್ಯ ತೋರಿಸಿ) ಅಂದರೆ? ನಿನಗೆ ಏನೂ ಕೇಳಿಸಲೆ ಇಲ್ಲ?

**ಹೆಂಗಸು:**— (ಬೇಜಾರದ ದನಿಯಲ್ಲಿ) ಅಯ್ಯ! ಕೇಳಿಸಿತು ಅಂತ ಹೇಳಿದೆನಲ್ಲ? ಅದೇ ಕೇಳಿಸಲಿಲ್ಲೇನೊ ಇವರಿಗೆ! ಕೇಳಿಸಿತು— **ಅಂತೇ** ಬಂದೆ.

**ಮುದುಕ:**— (ಮೊದಲಿನಂತೆ) ಕೇಳಿಸಿದರೆ ಇಲ್ಲಿ ಯಾಕ ಬರಬೇಕು? ಅಲ್ಲಿಂದಲ್ಲೆ ತಡೆಯಬೇಕು ಅದನ್ನ.

**ಹೆಂಗಸು:**— (ಚಕಿತಳಾಗಿ) ತಡೆಯಬೇಕು? ಏನು ತಡೆಯಬೇಕು?

**ಮುದುಕ:**— (ಅಣಕಿಸುತ್ತ) ಏನು ತಡೆಯಬೇಕು! ಅದಕ್ಕೆ ನಿನಗೆ ಕೇಳಿ**ಸಿಲ್ಲಾ** ಅಂತ ನಾನು ಕೂಗೋದು. ಥೂ! ಈ ಹಾಳು ಸಂಸಾರ

ಎಂದು ನೀಗೀತೊ ಅಂತೀನಿ. ಒಂದಿಷ್ಟು ಸಮಾಧಾನದಿಂದ ಸಂಧ್ಯಾವಂದನೆ ಮಾಡೇನೂ ಅಂದರ ಇಲ್ಲ. (ಒಮ್ಮೆಲೆ ಹೆಂಡತಿಗೆ ಸಿಟ್ಟಿನಿಂದ) ನಿನಗ ಪಲ್ಲೆ ಆರಿಸತಾ ಹೊರಗ ಕೂಡು ಅಂತ ಯಾರು ಹೇಳಿದ್ದರು?

**ಹೆಂಗಸು**:—(ಮೊದಲಿನಂತೆ) ಪಲ್ಲೆ ಆರಿಸಿದರ ಸಂಧ್ಯಾಸಕ್ಕ ತ್ರಾಸ ಆಗತದ?

**ಮುದುಕ**:—ಸುಟ್ಟಿತು ನಿನ್ನ ಪಲ್ಲೆ ಆರಿಸೋದು! ಇಲ್ಲಿ ಒಳಗ ಕಲ್ಲ ಹಾರಿಸತಾ ಇದ್ದಾರಿ ಕಲ್ಲು, ಯಾರೊ! 'ದೇವೇಂದ್ರನ ಒಬ್ಬಿಸೋದು ಹ್ಯಾಂಗ?' ಅಂತ ಸ್ವರ್ಗಕ್ಕೆ ಮುಟ್ಟೋ ದನಿಯಿಂದ ಕೂಗತಾಳೆ ಅಲ್ಲಿ ಆಕೆ ಒಳಗೆ, ನಾನು ಅನ್ನೋ ಸಂಧ್ಯಾವಂದನೆ ಮಂತ್ರ ನನಗೆಯೆ ಕೇಳಿಸೋದಿಲ್ಲ!

**ಹೆಂಗಸು**:—(ಸಂದರ್ಭ ತಿಳಿದು) ಸಾಕು! ಹಿಟ್ಟು ಬೀಸಬ್ಯಾಡ ಅಂತೀರೊ ಏನು ಇನ್ನ?

**ಮುದುಕ**:—ಹಿಟ್ಟು ಬೀಸಬೇಕಾದರ ಹೊಟ್ಟೆಹೊಟ್ಟೆ ಒಡೆದುಕೊಂಡು ಕೂಗಿಕೋಬೇಕು ಯಾಕೆ?

**ಹೆಂಗಸು**:—ನನಗ ಗೊತ್ತಿಲ್ಲ ತಾಯೀ! ಬೀಸುವಾಗ ಯಾರಾದರೂ ಹಾಡತಾರ—

**ಮುದುಕ**:—ಒಳಗಿಂದೊಳಗೆಯೆ ಮನಸಿನೊಳಗೇ ಹಾಡಬಾರದು ಯಾಕೆ? ಈಗ ನಾನು ಸಂಧ್ಯಾವಂದನ ಮಂತ್ರ ಒದರಿ ಅಂತೀನೇನು?

**ಹೆಂಗಸು**:—(ಮಾತು ಹಾರಿಸುವ ಹವಣಿಕೆಯಿಂದ) ಈವತ್ತಿಗಂತೂ ಮುಗೀತೊ ಇಲ್ಲೊ ಸಂಧ್ಯಾನ?

**ಮುದುಕ**:—ಏನು ಮುಗಿಯೋದೊ ಏನ್ಮಣ್ಣೊ! ಹಿಂದಕಿನ ಋಷಿಗಳ ಹಾಂಗ ವಾನಪ್ರಸ್ಥ ಆಶ್ರಮ ಸೇರಬೇಕು ಅಂತ ಅನಿಸತದ. ಈ ಮನೆಯೊಳಗಂತೂ ಸಂಧ್ಯಾವಂದನೆ ಸಾಗೋ ಹಾಗಿಲ್ಲ. ಹೊರಗೆ ಕೂಗಾಟ-ಚೀರಾಟ, ಒಳಗೆ ಇರುವೆಯ ಕಾಟ—

**ಹೆಂಗಸು**:—(ತಡೆಯದೆ) ಇರುವೆಯ ಕಾಟೂ ನನ್ನದೇ ತಪ್ಪೇನು? ಒಂದು ಐವತ್ತುಸಲ ಆದರೂ ನಾನು ಹೇಳಿರಬೇಕು—'ಬೆಲ್ಲದ ನೈವೇದ್ಯ ಕೊಡಬ್ಯಾಡರಿ, ಇರುವೆ ಆಗತಾವ' ಅಂತ!

**ಮುದುಕ:**—( ಹಂಗಿಸುವವನಂತೆ) ಅಷ್ಟು ಮಾಡೋದಕಿಂತ ಒಂದು ಮಣೆ ಇಟ್ಟುಬಿಡಬೇಕು ದಿನಾಲು ಕೂತುಕೊಳ್ಳಲಿಕ್ಕೆ ?

**ಹೆಂಗಸು:**—( ಕಳವಳದ ದನಿಯಲ್ಲಿ ) ಅದನ್ನೂ ನೀವೇ ಬ್ಯಾಡ ಅಂತ ಹೇಳತೀರಿ! ಒಂದು ದಿವಸ ಇಟ್ಟಿದ್ದಿಲ್ಲ ಮಣೆ ದೇವರ ಮನೆಯೊಳಗ? ಹೋದವರೆ ಅದನ್ನ ಎಡವಿ ಬಿಟ್ಟು, ಬಿದ್ದು ಮೊಣಕಾಲ ಒಡಕೊಂಡು, ಒದರಾಡಿ ಮಾಳಿಗೆ ಕೆಳಗ–ಮ್ಯಾಲ ಮಾಡಿದಿರಿ! ಒಂದು ಕಂದೀಲ ಇಡತೀನಿ ಅಂದರ—ಆ ಹಾಳು ಎಣ್ಣೆ ದೇವರ ಮನೆಯೊಳಗ ಮೈಲಿಗೆ— ಅಂದಿರಿ? ಬೇಕಾದರ ಒಂದು ೪–೬ ಎಮ್ಮೆ ಸಾಕರಿ, ಕಂದೀಲ ತುಂಬಿ ತುಪ್ಪದ ದೀಪ ಹಚ್ಚುತೀನಿ, ಕೂಡಲಿಕ್ಕೆ ಕಾಣಿಸೋ ಹಾಂಗ ಒಂದು ಮಣೇನೂ ಇಡತೀನಿ..ನನಗೂ ಕೈಲೆ ಆಗೋದಿಲ್ಲ..ಅದಕೇ ಹೇಳ ತೀನಿ, ಲಗೂನೆ ಒಂದು ಸೊಸೀನ್ನ ತಂದುಬಿಡಿರಿ, ಮನೆಗೆಲಸಕ್ಕೂ ಆಯಿತು, ಮನೆಯವರ ಸೇವಾಕ್ಕೂ ಆಯಿತು..ನಾನೂ ಆ ಮ್ಯಾಲೆ ಪೆನಶನ್ ತಗೋತೀನಿ.

**ಮುದುಕ.**—'ಧಾತಾ ಯಥಾಪೂರ್ವಮಕಲ್ಪಯತ್'.. ಕಡೆಗೆ ಅಲ್ಲಿಗೇ ತಂದು ನಿಲ್ಲಿಸಿಬಿಟ್ಟೆಯಾ ನಿನ್ನ ಮಾತು? ಏನು ಮಗಾನೋ— ಏನು ಸೊಸೆಯೊ? ( ಬಲಬದಿಗೆ ಹೊರಡುವನು ).

**ಹೆಂಗಸು:**—ಮಾವನವರೂ ಹೀಂಗೇ ಅಂದಿದ್ದರ ಎಷ್ಟು ಚಲೋ ಆಗತಿತ್ತು ಅಂತೀನಿ.

**ಮುದುಕ:**—( ತಿರುಗಿ ನಿಂತು) ಅಂದರೆ ನನಗೆ ಏನು ಮಾಡಂತೀ? ಇಷ್ಟು ದಿವಸ ನಿಮ್ಮೆಲ್ಲರ ಸಲುವಾಗಿ ಅಂತ ಹಗಲು–ರಾತ್ರಿ ಮಾಡ ಬಾರದನ್ನ ಮಾಡಿ ದುಡಿದೆ; ಇನ್ನು ಇಂದಿಲ್ಲ ನಾಳೆ ಸಾಯೋದು, ಅಷ್ಟ ರೊಳಗ ಸಂಧ್ಯಾ–ಸಮಾರಾಧನೆ ಮಾಡಿ ಏನಾರೆ ಪುಣ್ಯಾ ಗಳಿಸಿಕೋ ಅಂತೀಯೊ? ಏನು ಇನ್ನೂ ಸಂಸಾರದಾಗೇ ತೊಡಗು ಅಂತೀಯೊ?

**ಹೆಂಗಸು:**—( ಆಶ್ಚರ್ಯದ ದನಿಯಲ್ಲಿ) ಸಂಸಾರದಾಗೇ ಅಂದರ? ಕೆಲಸಕ್ಕ ಪೆನಶನ್ ಅಂದರ ಮನೀಯಿಂದಲೂ ಪೆನಶನ್ ಅಂತ ತಿಳಿದು ಕೊಂಡಿರೇನು ?

**ಮುದುಕ**:— (ಬೇಜಾರಾದ ದನಿಯಲ್ಲಿ) ನಾ ಏನೂ ತಿಳಿದುಕೊಂಡಿಲ್ಲ, ಮಹಾರಾಯಳೆ; ಮೊದಲು ನನ್ನ ಸಂಧ್ಯಾವಂದನ ಮುಗಿಯಲಿ, ಆ ಮ್ಯಾಲೆ ಮಾತಾಡೋಣಂತೆ! (ಮತ್ತೆ ಹೊರಡುವನು)

**ಹೆಂಗಸು**:— ಏನು ಸಂಧ್ಯಾನೊ ಏನೊ! ಒಬ್ಬರು ಮುಂಜಾನೆದ್ದು ಸಂಧ್ಯಾನ ಅಂತ ಒಂದು ಮೂಲೆ ಹಿಡೀತಾರ, ಒಬ್ಬರು ಮುಂಜಾನೆ ಎಷ್ಟೊತ್ತಾದರೂ ಏಳೋದೇ ಇಲ್ಲ! ಮನೀನೆ ಮನೀ, ನಾನೇ ನಾನು. ಯಾರ ಸಲುವಾಗಿ ಅಂತ ಮಾಡಬೇಕೊ, ಎಷ್ಟು ದಿವಸ ಅಂತ ಮಾಡ ಬೇಕೊ! (ಎಂದು ಗುಣುಗುಟ್ಟುತ್ತ ಎಡಬದಿಯಿಂದ ಹೋಗುವಳು).

**ಮುದುಕ**:— (ಅವಳಿಗೆ ಉತ್ತರ ಕೊಡಬೇಕೆಂದು ತಿರುಗಿ ನಿಂತು, ಅವಳು ಇಲ್ಲದ್ದನ್ನು ನೋಡಿ ಒಮ್ಮೆಲೆ ಮಂತ್ರಗಳನ್ನು ವಟಗುಟ್ಟುತ್ತ ಬಲಬದಿಯಿಂದ ಹೋಗು ವನು.)

[ಕೆಲಹೊತ್ತು ನಿಃಶಬ್ದತೆ]

[ಒಂದೆರಡು ನಿಮಿಷಗಳಲ್ಲಿ ಹೆಂಗಸು ಮತ್ತೆ ಎಡಬಾಗಿಲಿನಿಂದ ಬಂದು ಗಡಿ ಯಾರವನ್ನು ಹಿಡಿವೆತ್ತಿ ಕಿವಿಗೊಟ್ಟು ಕೇಳಿ ಅದನ್ನು ಕೆಳಗಿಡುವಳು; ತಿರುಗಿ ಹೊರಡ ಬೇಕೆನ್ನುವಷ್ಟರಲ್ಲಿ ಗಟ್ಟಿಯಾಗಿ ಆಕಳಿಸುವ ದನಿ ಕೇಳಬರುವದು. ಅದನ್ನು ಕೇಳಿ ತನ್ನಷ್ಟಕ್ಕೆ ಮುಗುಳ್ನಗೆ ನಗುವಳು. ಇಷ್ಟರಲ್ಲಿ ಎಡಬಾಗಿಲಿನಿಂದ ಒಂದೇಸವನೆ ಆಕಳಿಸುತ್ತ ಕಣ್ಣುಗಳನ್ನೊರೆಸಿಕೊಳ್ಳುತ್ತ ಅಸ್ತವ್ಯಸ್ತವಾಗಿ ಶರ್ಟನೊಂದನ್ನೆ ತೊಟ್ಟು ಕೊಂಡ ಸುಮಾರು ೨೫ ವಯಸ್ಸಿನ ಯುವಕನು ಬರುವನು. ಬಂದವನೆ ಅತ್ತಿತ್ತ ಕಣ್ಣು ಕಣ್ಣು ಪಿಳುಕಿಸುತ್ತ ನೋಡಿ ಹೆಂಗಸು ದೃಷ್ಟಿಗೆ ಬೀಳಲು ಮತ್ತೊಮ್ಮೆ ಬಲು ಜೋರಾಗಿ ಆಕಳಿಸುವನು.]

**ಹೆಂಗಸು**:— (ಬಲಬದಿಯ ಬಾಗಿಲನ್ನು ತೋರಿಸುತ್ತ) ಶ್‌ಶ್ (ಎಂದು ಸುಮ್ಮನಿರಲು ಹೇಳುವಳು).

**ಯುವಕ**:— (ಇಳಿದನಿಯಲ್ಲಿ) ನಡೆದಿದೆ ಏನು? (ಎಂದು ಚಪ್ಪಾಳೆ ಬಡೆದು ಕೈತಿರುಗಿಸಿ ಸನ್ನೆಯಿಂದ ಕೇಳುವನು).

**ಹೆಂಗಸು**:— ಯಾವಾಗ ನಸಕಿನಾಗಿನಿಂದ ನಡೆದಿದೆ ಆನ್ನೀಕ (ಆಹ್ನಿಕ)— (ಇಷ್ಟರಲ್ಲಿ ಯುವಕನು ವಿಚಾರಮಗ್ನನಂತೆ ನಿಂತುದನ್ನು ನೋಡಿ) ಏನೋ, ಪುಟ್ಟೂ, ಇನ್ನೂ ನಿದ್ದೆ ಹೋಗಿಲ್ಲೇನು ಕಣ್ಣೊಳಗಿಂದ?

**ಪುಟ್ಟು**:— ನಿದ್ದೆ ಅಲ್ಲ, ಅವ್ವಾ; ಹೀಗೇ ಒಂದು ವಿಚಾರ ಬಂದಿತು.

ಒಬ್ಬರು ಆಕಳಿಸಿದರೆ ಇನ್ನೊಬ್ಬರು ಆಕಳಿಸುವರು. ಅಲ್ಲವೆ? ಈಗ ನನಗೆ ಆಕಳಿಕೆ ಬಂದಿದೆ; ಒಳಗೆ ಅಪ್ಪ ಆಹ್ನಿಕ ನಡೆಸಿದಲ್ಲಿ ಹೋಗಿ ಆಕಳಿಸಿ ನೋಡೋಣೇನು ಅಂತ; ಅಂದರೆ, ಅಪ್ಪನಿಗಾದರೂ ಆಕಳಿಕೆ ಬರಬಹುದು, ಅವನು ಮುಂದಿಟ್ಟುಕೊಂಡ ಮೂರ್ತಿಗಾದರೂ ಆಕಳಿಕೆ ಬರಬಹುದು. ( ಒಮ್ಮೆಲೆ ತಡೆದು ) ಮತ್ತೆ—ಮಡಿಯಿಂದಿದ್ದಾಗ ಆಕಳಿಕೆ ಬಂದರೆ ಮೈಲಿಗೆ ಆಗೋದೇನು ?

**ಅವ್ವ**:— ಸಾಕು ಬಿಡು, ಪುಟ್ಟೂ; ಹಾಂಗ ಕುಚೇಷ್ಟಾ ಮಾತ ಬಾರದು. ಅವರಾದರೂ ಏನು? ಈಗ ಮುಂಜಾನೆ ಎದ್ದು ಮೂಗು ಹಿಡೀತಾರ. ನಿನ್ನಷ್ಟು ಇದ್ದಾಗ ಹೀಂಗೇ ಏನಾದರೂ ಮಾಡತಿದ್ದರು. ನಾನು ಎಷ್ಟು ಹೇಳಿದರೂ—

**ಪುಟ್ಟು**:— ( ನಡುವೆಯೆ ) ಕೇಳತಿದ್ದಿಲ್ಲ. . ಅಹುದಲ್ಲೊ ? ಅಪ್ಪ ನಿನ್ನ ಮಾತು ಕೇಳಿತಿದ್ದಿಲ್ಲ ಅಂತ ಮಗನಿಗೂ ಹೇಳೋದನ್ನ ಬಿಟ್ಟೆಯಲ್ಲ ?

**ಅವ್ವ**:— ( ಹೆಮ್ಮೆಯ ದನಿಯಲ್ಲಿ ) ನೀನು ಯಾರ ಮಗ? ಅವರ್ಹಾಂಗೇ ನೀನು !

**ಪುಟ್ಟು**:— ( ನೊಂದವನಂತೆ ) ಅಂದರೆ ? ನಾನೂ ಪೆನಶನ್ ತಕ್ಕೊಂಡ ಮೇಲೆ ಒದ್ದೇ ಸೂಟ ಹಾಕಿಕೊಂಡು ಮಡಿ ಮಾಡತೀನಿ ಅನ್ನುವಿಯೊ ಏನು ? ( ವಿಚಾರಮಾಡುವವನಂತೆ ) ಆದರೂ ನನಗೇನು ಹೆದರಿಕೆ ಇಲ್ಲ. ಮಡಿ ಮಾಡಬೇಕಾದರೆ ಪೆನಶನ್ ಬೇಕು; ಪೆನಶನ್ ತಕ್ಕೊಳ್ಳಬೇಕಾದರೆ ಮೊದಲು ಕೆಲಸ ಇರಬೇಕು; ನನಗೆ ಕೆಲಸವೆ ಸಿಕ್ಕೋದಿಲ್ಲ ಅಂದಮೇಲೆ—

**ಅವ್ವ**:— ( ನಡುವೆಯೆ ) ಹಾಂಗ ಕೆಟ್ಟಕೆಟ್ಟ ಮಾತು ಆಡಬ್ಯಾಡ. ಕೆಲಸ ಸಿಗದೇ ಏನ್ಮಾಡ್ತತದ? ಅವರಿಗೆ ಇಷ್ಟು ಕಡೆ ಗುರುತು ಇದೆ, ಯಾರಿಗೊಬ್ಬರಿಗೆ ಹೇಳಿದರ ಸಾಕು—

**ಪುಟ್ಟು**:— ಅಹುದವ್ವಾ, ಹೇಳಿದರೆ ಸಾಕು; ಆದರೆ ಹೇಳಲಿಕ್ಕೆ ವೇಳೆ ಬೇಕಲ್ಲಾ ? ಸ್ನಾನ ಆದ ಮೇಲೆ ಸಂಧ್ಯಾವಂದನೆ, ಸಂಧ್ಯಾವಂದನೆ ಆದಮೇಲೆ ಸ್ನಾನ; ಮತ್ತೆ ಸ್ನಾನ, ಮತ್ತೆ ಪೂಜಾ; ಮತ್ತೆ ಸ್ನಾನ, ಮತ್ತೆ ಊಟ; ಮತ್ತೆ ಸ್ನಾನ—

**ಅವ್ವ**:— ನೀನೂ ಎದ್ದಕೂಡಲೆ ಸ್ನಾನ ಮಾಡಲ್ಲ?

**ಪುಟ್ಟು**:— ನಮ್ಮದೂ ಆಹ್ನಿಕ ಆಗಬೇಕಲ್ಲ? ಚಹಾ ನಾನೇ ಮಾಡಿಕೊಳ್ಳಲಿಯಾ? ಈಹೊತ್ತು ಒಂದಿವಸಾದರೂ ನೀನು ಮಾಡಿ ಕೊಡಬಾರದೆ?

**ಅವ್ವ**:— ನಾನು ಮುದುಕಿ ಆದೆ; ಬ್ಯಾಗ ಒಂದು ಮದಿವೆ ಮಾಡಿಕೊ, ಬಂದ ಹೆಂಡತಿ ಮಾಡಿಕೊಟ್ಟಾಳು. ಅಲ್ಲಿಯ ತನಕ ನಿನ್ನ ಕೈಯಿಂದಲೆ ಮಾಡಿಕೊಳ್ಳಲಿಕ್ಕೆ ಹಚ್ಚತೀನಿ.

**ಪುಟ್ಟು**:— ಅಂತೂ ಚಹಾ ಮಾಡಿಕೊಳ್ಳಲಿಕ್ಕೆ ಬೇಸತ್ತಾದರೂ ಮದಿವೆ ಮಾಡಿಕೊಳ್ಳತೀನಿ ಅಂತ ಆಶಾ—ನಿನಗೆ! (ಬಲಬದಿಗೆ ಹೊರಡು ವನು).

**ಅವ್ವ**:— (ಮೆಲ್ಲಗೆ) ಪುಟ್ಟೂ—

**ಪುಟ್ಟು**:— (ತಿರುಗಿ ನಿಂತು ತಾಯಿಯನ್ನು ನೋಡುವನು. ಅವಳ ಮುಖ ದಲ್ಲಿ ಹೆದರಿಕೆಯು ಕಳೆಯಿದೆ. ಅದನ್ನು ಕಂಡು) ಏನವ್ವಾ, ಏನಾದರೂ ಆಗಿದೆ ಏನು?

**ಅವ್ವ**:— (ಕೆಳಗೆ ನೋಡುತ್ತ) ನಾಳೆ ಐದಾನೋವಿ (ಅಪಿಧವಾ ನವಮಿ)

**ಪುಟ್ಟು**:— (ಸಂಶಯದಿಂದ) ಹಾಲು ಮಡಿಯೊಳಗಿಟ್ಟಿದೆ ಏನು?

**ಅವ್ವ**:— (ಅವನ ಮಾತನ್ನು ಲಕ್ಷಿಸದೆ) ಇಷ್ಟು ದಿವಸ ನೀನು ಕಲಿಯ ಲಿಕ್ಕೆ ಅಂತ ಹೋಗಿರತಿದ್ದಿ, ಅದಕ್ಕೆ ನಿನಗೆ ಹೇಳಿದ್ದಿಲ್ಲ. ಆದರ ಈ ಸಾರೆ ನೀನು ಮನೆಯೊಳಗೆಯೆ ಇರುವೆ, ನಿನಗೆಯೆ ಮಾಡಬೇಕಾಗೋದು—

**ಪುಟ್ಟು**:— (ನಗೆಯಿಂದ) ಮಾಡಿಕೊಂಡವರೆ ಅನುಭೋಗಿಸಲಿ, ಅವ್ವಾ, ನೀನು ಯಾಕೆ ಇಷ್ಟು ಹೆದರುವೆ? ಇದಲ್ಲದೆ, ಮಲಮಗನ ಕೈಯಿಂದ ನೀರು ಕುಡಿಯೋದಿಲ್ಲ ಆ ಪುಣ್ಯಾತ್ಮಳು.

**ಅವ್ವ**:— (ಏನನ್ನೊ ಹೇಳಬೇಕೆಂದು—ಅಷ್ಟರಲ್ಲಿ ತಡೆದು—ಮುಖ ತಿರುಗಿಸಿ) ನನಗಿನ್ನೂ ಪಲ್ಲೆ ಆರಿಸಬೇಕಾಗೇದ (ಎಂದು ಲಗಬಗೆಯಿಂದ ಎಡಬಾಗಿಲಿ ನಿಂದ ಹೋಗುವಳು).

[ಪುಟ್ಟುವು ಒಂದು ನಿಮಿಷ ನಿಂತಲ್ಲಿಯೆ ಸ್ತಬ್ಧನಂತೆ ನಿಲ್ಲುವನು. ಮೆಲ್ಲಗೆ 'ಅವಿಧವಾನವಮಿ' ಎಂಬ ಶಬ್ದವು ಅವನ ಬಾಯಿಯಿಂದ ಹೊರಬೀಳುವುದು. ವಿಚಾರಮಗ್ನನಾಗಿ ಅತ್ತಿತ್ತ ತಿರುಗಾಡುವನು. ಕೊನೆಗೆ ಕುರ್ಚಿಯ ಮೇಲೆ ಕುಳಿತು ಕೊಂಡು ಮೇಜಿನಲ್ಲಿ ಊರಿದ ಎರಡೂ ಕೈಗಳಲ್ಲಿ ಕೆನ್ನೆಯನ್ನಿಟ್ಟು ಹಾಗೆಯೆ ವಿಚಾರ ಮಾಡುವನು; ನಿರುಪಾಯನಾಗಿ ಕೈಚಲ್ಲಿ ಮೆಲ್ಲಗೆ ನಡೆಯುತ್ತ ಬಲದ ಬಾಗಿಲಿನಿಂದ ಹೋಗುವನು.]

[ಕೆಲಹೊತ್ತು ನಿಃಶಬ್ದತೆ]

[ಒಂದೆರಡು ನಿಮಿಷಗಳಲ್ಲಿ ಬಲಬಾಗಿಲಿನಿಂದ ವಿಶ್ವಾಮಿತ್ರನೆ ಏನೊ ಎನ್ನು ವಂತೆ ರಭಸದಿಂದ, ಸಿಟ್ಟಿನಿಂದ ಮುದುಕನು ಬರುವನು].

**ಮುದುಕ**:— ಪ್ರಾತಃ ಸಂಧ್ಯಾವಂದನ ಸಾಯಂಕಾಲಕ್ಕೆ ಮುಂಗಿ ಯೋದು ಹೀಂಗಾದ್ರ! ಏ-ಏನೆ-ಯಾರು ಹಚ್ಚಿದರು ಆ ಹಾಳು ಸ್ಟೋವ (stove) ನ್ನು? ಒಗೆ ಅದನ್ನ ಹೊರಗ! ಏ— ಕೇಳಿಸತೇನು? ನಾನು ಇಲ್ಲಿ ಒದರತೀನಿ.

[ಹೊರಗಿನಿಂದ ಅಣ್ಣಾ ಅವರ ಎಂಬ ಕೂಗು]

(ಅದನ್ನು ಕೇಳಿ) ಹಾಳಾಯಿತು! ಮತ್ತೆ ಮೈಲಿಗೆ! ಯಾವ ಹೊಲೆಯು ಒದರತಾನೊ ಏನೊ?

[ಮತ್ತೆ 'ಅಣ್ಣಾ ಅವರ' ಎಂಬ ಕೂಗು]

**ಅವ್ವ**:— ಯಾರವರು? (ಎನ್ನುತ್ತ ಕಾಯಿ-ಪಲ್ಲೆಯನ್ನೆಲ್ಲ ಎತ್ತಿಕೊಂಡು ಬರುವಳು) ಯಾರು?

**ಮುದುಕ**:— (ಇಳಿವಸಿಯಲ್ಲಿ ಅಣಕಿಸುತ್ತ) ಯಾರು? ಯಾರಂತ ಏನು ಕೇಳತೀ? ನಿನಗೆ 'ಅಣ್ಣಾ ಅವರ' ಅಂತಾರ? ಯಾರು-ಅಂತ ಒಳಗ ಬರತಾಳ! ಈಗ ಸಂಧ್ಯಾವಂದನೆ ಮಾಡತಾರ ಅಂತ ಹೇಳಬಾರದೆ ಮುಂದೆ ಹೋಗಿ; ಥೂ! ಯಾವ ಮುಹೂರ್ತದೊಳಗೆ ಪೆನಶನ್ ತಕ್ಕೊಂಡೆ ಅಂತೀನಿ—ಸಂಧ್ಯಾವಂದನಕ್ಕ ವ್ಯಾಳ್ಯೆ ಸಿಗೋದಿಲ್ಲ.

**ಅವ್ವ**:— (ಸಿಡುಕಿನಿಂದ ಗಂಡನನ್ನು ನೋಡಿ ಕೈಯೊಳಗಿನ ಕಾಯಿ-ಪಲ್ಲೆ ನೆಲಕ್ಕೆ ಅಪ್ಪಳಿಸಿ ಬಿಸುಟಿ ಎಡಬಾಗಿಲಿನಿಂದ ಹೊರಗೆ ಹೋಗುವಳು. ಅರೆ ನಿಮಿಷದಲ್ಲಿ ತಿರುಗಿ ಬರುವಳು. ಗಂಡನನ್ನು ನೋಡುವುದಿಲ್ಲ. ಆವನು ಮಾತ್ರ ಆತುರತೆಯಿಂದ ಅವಳನ್ನು ನೋಡುತ್ತಿರುವನು. ಕೊನೆಗೆ ಕಾಯಿ-ಪಲ್ಲೆ ಸಾವರಿಸುತ್ತ ತನ್ನಷ್ಟಕ್ಕೆ

ಎಂಬಂತೆ) ಕರೆಪ್ಪನೊ ಮರೆಪ್ಪನೊ! ಒಂದಿಷ್ಟು ಮುಂಜಾನೆ ಹೊತ್ತೀರೋದರೊಳಗ ಕಾಯಿ-ಪಲ್ಲೆ ಆರಿಸೇನೂ ಅಂದರ ಇಲ್ಲ. ಸಂಧ್ಯಾನ ಅಂತ ಒಳಗಿನಿಂದ ಇವರು ಕೂಗೋದು, ಕೆಲಸಕ್ಕ ಅಂತ ಬಂದವರು ಇವರ ಹೆಸರಿನಿಂದ ಹೊರಗ ಕೂಗೋದು! ಮನೆ ಅಂದರ ಧರ್ಮಸಾಲೆ ಆಗೇದ.

**ಮುದುಕ**:— (ತಡೆಯದೆ, ಸಿಟ್ಟು ಹೆಚ್ಚಾದರೂ ಇಳಿದನಿಯಲ್ಲಿಯೆ) ಯಾರು ಅವರು ಕೂಗುವವರು ಹೊರಗ ಅಂದೆ!

**ಅವ್ವ**:— (ಸಿಡುಕಿನಿಂದ) ಹೇಳಿದೆನಲ್ಲ ಯಾವನೊ ಕರೆಪ್ಪನೊ ಮರೆಪ್ಪನೊ ಅಂತ! ಊರ ಗಂಡಸರ ಹೆಸರೆಲ್ಲ ನನಗ ಗೊತ್ತಿವೆ ಅಂತ ತಿಳಿದರೊ ಏನೊ!

[ಎಡಬಾಗಿಲಿನಲ್ಲಿಯೆ 'ಅಣ್ಣಾ ಅವರ' ಎಂಬ ದನಿ]

(ಮೇಲಕ್ಕೆ ನೋಡದೆ) ಸಂಧ್ಯಾನ ಮಾಡತಾರಂತ—ಕೂಡಪ ಒಂದಿಷ್ಟು.

[ಇಷ್ಟರಲ್ಲಿ 'ಅಣ್ಣಾ ಅವರ' ಎಂದು ಕೂಗಿದ ವ್ಯಕ್ತಿಯು ಒಳಗೆಯೆ ಬಂದಿರುವನು. ಆದ (ಅವನ) ನ್ನು ನೋಡಿ]

**ಮುದುಕ**:— (ಒಮ್ಮೆಲೆ ನಗೆಯಿಂದ) ಯಾರು—ಧರೆಪ್ಪ ಏನು? ಕೂಡು—ಧರ್ಮ್ಯಾ—ಬಂದೆ (ಈ ದನಿಯನ್ನು ಕೇಳಿ ಹೆಂಗಸು ಚಕಿತಳಾಗಿ ಗಂಡನನ್ನೂ ಧರೆಪ್ಪನನ್ನೂ ನೋಡುವಳು. ಅದನ್ನು ಕಂಡು ದರ್ಪದ ದನಿಯಲ್ಲಿ) ಹೊರಗ ಕೂಡೊ! ಏ—ಹುಚ್ಚ್ಮುಂಡೆಗಂಡ! ಮಡಿಯೊಳಗೆ ಇದ್ದೀನಿ ನಾನು— ಕಾಣಿಸೋದಿಲ್ಲ?

**ಧರೆಪ್ಪ**:— (ನಾಚಿ) ನನಗೊತ್ತಿದ್ದಿಲ್ರಿ, ಅಣ್ಣಾವ್ರ—

**ಮುದುಕ**:— ಹೌರಗೂ-ಹೌರಗ (ಹಗುರು-ಮೆತ್ತಗೆ) ಮಾತಾಡೂ ಒಂದಿಷ್ಟು. ನಾನು ಮಡಿಯೊಳಗಿದ್ದೀನಿ!

**ಧರೆಪ್ಪ**:— (ಹೆದರಿ) ಕುಂತುಕೋತೀನ್ರಿ, ಅಣ್ಣಾವ್ರ. (ಹೋಗುವನು).

[ಮುದುಕನು ಬಲಬದಿಗೆ ಹೊರಡುವನು. ಹೆಂಡತಿಯು ಮುಖವೆತ್ತಿ ಅವನನ್ನು ನೋಡಿ ಕೆಣಕುವಂತೆ 'ಹುಂ' ಎಂದು ಉಸುರ್ಗರೆಯುವಳು. ಅವನು ತಿರುಗಿ ನಿಲ್ಲಲು ಮತ್ತೆ ಕೆಲಸದಲ್ಲಿ ತೊಡಗಿದಂತೆ ಮಾಡುವಳು. ಮುದುಕನೂ ಉಸಿರೆಳೆಯುವನು. ಅವಳು ಕೇಳದಂತೆ ನಟಿಸುವಳು. ಮತ್ತೊಮ್ಮೆ ಉಸಿರೆಳೆಯುವನು. ಮತ್ತೂ ಹಾಗೆಯೆ. ಕೊನೆಗೆ— ]

**ಮುದುಕ**:— (ದರ್ಪದ ದನಿಯಲ್ಲಿ) ಏನೂ ತಿಳಿಯೋದೇ ಇಲ್ಲ!

**ಅವ್ವ**:— (ಕೆಳಗೆ ಮುಖ ಮಾಡಿ ಕೆಲಸದಲ್ಲಿಯೆ ತೊಡಗುವಳು).

**ಮುದುಕ**:— (ತಿರಸ್ಕಾರದ ದನಿಯಲ್ಲಿ) **ಏನೇನೂ** ತಿಳಿಯೋದಿಲ್ಲ-ಅಂದೆ.

**ಅವ್ವ**:— (ಮೇಲಿನಂತೆ)

**ಮುದುಕ**:— (ಕನಲಿ) ಎಳ್ಳಷ್ಟು ತಿಳಿಯೋದಿಲ್ಲ ಅಂದೆ—ಏನು—ಕೇಳಿಸತೇನು? ಯಾರ ಜೋಡಿ ಮಾತಾಡತೀನಿ?

**ಅವ್ವ**:— (ಮುಖವನ್ನು ಎತ್ತದೆಯೆ) ಸಂಧ್ಯಾನದಾಗ ಯಾರ ಜೋಡಿ ಮಾತಾಡತಿರತಾರ ನನಗೇನು ತಿಳಿಯಬೇಕು ಹೆಂಗಸಿಗೆ? ಸಂಧ್ಯಾನ ಮಾಡವ್ರಿಗೆ ಗೊತ್ತು!

**ಮುದುಕ**:— (ಸಿಟ್ಟಿನಿಂದ) ಸುಟ್ಟಿತು ನಿನ್ನ ಸಂಧ್ಯಾನ! ಸಂ–ಧ್ಯಾ–ವಂ–ದ–ನ. 'ಸಂಧ್ಯಾವಂದನ' ಅಂತ ಅನುವಷ್ಟು ಸಂಸ್ಕಾರ ಇಲ್ಲದ್ದು ಬಂದವರನ್ನ ಮಾತಾಡಿಸಿ ಕೇಳೀತೇನು ಮಣ್ಣು?

**ಅವ್ವ**:— (ಚಕಿತ ದೃಷ್ಟಿಯಿಂದ ಗಂಡನನ್ನು ನೋಡುತ್ತ) ಮನಿಗೆ ಬಂದ ಗಂಡಸರನ್ನ **ನಾನು** ಮಾತಾಡಿಸಬೇಕ?

**ಮುದುಕ**:— (ದನಿಯನ್ನ ಣಕಿಸುತ್ತ) ಅಂದರೆ ಮುಡಿಯೊಳಗಿದ್ದ ನಾನು ಮಾತಾಡಿಸಬೇಕೆ? ಬುದ್ಧಿ ಇದ್ದ ಹೆಂಗಸಾಗಿದ್ದರ 'ಯಾರು–ಏನು ಕೆಲಸ?' ಅಂತ ಅವರಿಗೆ ಕೇಳಿ, ನಾನು ಹೇಳಿದ್ದನ್ನ ಅವರಿಗೆ ಹೇಳಿ—ನಮ್ಮ ಸಂಭಾಷಣ ನಡೆಸಬಹುದಾಗಿತ್ತು. ಸಮಕ್ಷಮ ನಾನೇ ಅವನ ಕೂಡ ಮಾತಾಡಿಸರ ನನಗೆ ಮೈಲಿಗೆ ಆಗತದ ಅಂತ ಇಷ್ಟು ತಿಳಿಯ ಬಾರದ ನಿನಗೆ? ಮತ್ತೆ ಕೂತಾಳೆ ಮುಂದಿ ಬರುವಲ್ಲಿ ಪಲ್ಲೆ ಆರಿಸತಾ! (ಹೆಂಡತಿ ಉತ್ತರ ಕೊಡುವಳೆಂದು ಕಂಡಾಕ್ಷಣ) ಸಂಧ್ಯಾವಂದನೀನು ನಾವೇ ಮಾಡಬೇಕು, ಸಂಸಾರಾನೂ ನಾವೇ ನಡಿಸಬೇಕು. (ಎನ್ನುತ್ತ ಬಲಬದಿಯ ಬಾಗಿಲಿನಿಂದ ಹೋಗುವನು).

[ ಹೆಂಡತಿಯು ಕೆಳಗೆ ಮುಖ ಮಾಡಿ ತನ್ನ ಕೆಲಸದಲ್ಲಿ ತೊಡಗುವಳು. ಎಡಬದಿಯಿಂದ ಧರೆಪ್ಪನು ಮೆಲ್ಲನೆ ಹೆಜ್ಜೆಗಳನಿಡುತ್ತ ಹೆದರಿದ ಕಳೆಯಿಂದ ಬರುವನು. ಅದೇ ಸಮಯಕ್ಕೆ ಬಲಬದಿಯಿಂದ ಮುದುಕನು ಮೈಮೇಲೆ ಧೋತರವನ್ನು ಹೊದ್ದುಕೊಳ್ಳುತ್ತ ಬರುವನು. ]

**ಧರೆಪ್ಪ**:— (ಹೆದರಿಕೆಯ ಮೆಲುದನಿಯಲ್ಲಿ ಮುದುಕನಿಗೆ) ಅಣ್ಣಾ ಅವರ–

**ಅವ್ವ**:— (ಮುಖವನ್ನು ಮೇಲಕ್ಕೆತ್ತದೆಯೆ) ಅಯ್ಯ! ಸಂಧ್ಯಾನ ಮಾಡ್ತಾರ, ಕೂಡು ಅಂತ ಹೇಳಿದರ— (ಎಂದು ಮುಖವೆತ್ತುವಾಗ ಗಂಡನು ಬಂದುದ ಕಂಡು) ಮುಗಿಧಾಂಗಾಯಿತೇನೊ ಸಂಧ್ಯಾನ! (ಎಂದು ಸಾವರಿಸಿ ಕೊಂಡು ಏಳುತ್ತಿರುವಳು).

**ಮುದುಕ**:— (ಸಿಡುಕಿನ ದನಿಯಲ್ಲಿ) ಆ ಸ್ಟೋವಿನ ಭರಾಭರಾಟ ದೊಳಗೆ ಬೈದರೂ ಅಷ್ಟೆ, ಸಂಧ್ಯಾವಂದನ ಮಾಡಿದರೂ ಅಷ್ಟೆ.

**ಹೆಂಗಸು**:— ಹುಂ— (ಎಂದು ಉಸಿರೆಳೆದೆದ್ದು) ಎರಡೂ ಅಷ್ಟೆ ಹ್ಯಾಂಗ ಆದಾವು! ದಿನದಿನಕ್ಕ ಸಂಧ್ಯಾನಕ್ಕಿಂತ ಬೈಯೋದೇ ಹೆಚ್ಚಾ ಗೇದ (ಎಂದು ಬಲಬದಿಯ ಬಾಗಿಲಿನ ವರೆಗೆ ಹೋಗಿ ತಿರುಗಿ ನಿಂತು) ಇನ್ನು ಒಲಿ ಹೊತ್ತಿಸಲಿ ಹೌದಲ್ಲೊ? ಅಂದರ **ಇನ್ನೂ ಒಂದಿಷ್ಟು** ಹೊಗೆ ಏಳತದ ಅಂತ! (ಎಂದು ಒಳಕ್ಕೆ ಹೋಗುವಳು).

**ಮುದುಕ**:— (ಸಿಟ್ಟಿನ ಕಳೆಯ ಮುಖವನ್ನು ಧರೆಪ್ಪನ ಕಡೆ ತಿರುಗಿಸಿ ದರ್ಪದ ದನಿಯಲ್ಲಿ) ಏನೊ? ತಂದೀಯೇನೊ ರುಪಾಯಿ?

**ಧರೆಪ್ಪ**:— (ಉಗುಳ್ನುಂಗುತ್ತ) ತಂದೀನ್ರಿ, ಅಣ್ಣಾ; ಅಂನ್ರ ತರಲಾಕೇ ಅಂತ ಹೊಂಟಿದ್ದಿನ್ರಿ, ಅಟರಾಗ ಯಾರೊ ಕುಲಕರ್ಣಿ ಯಂಕಪ್ಪನೋರು ಅಂತ ಬಂದರ್ರಿ—

**ಮುದುಕ**: — (ಮೊದಲಿನಂತೆ) ಯಾರು ಬಂದರು ಯಾರು ಹೋದರು– ಆ ಒಣ ಉಸಾಬರಿ ನನಗೆ ಬೇಡ. ನೀನು ಹೋದ ತಿಂಗಳಿಗೂ ಬಡ್ಡಿ ಕೊಡಲಿಲ್ಲ; ಈ ಹೊತ್ತು ಕೊಡಲಿಲ್ಲ ಅಂದರೆ—ನಾನು ಆ ಸಾಮಾನು ಮಾರಿಕೊಂಡು ಬಿಡುವವ ನೋಡು.. ನನಗೂ ಹಣದ ಅಡಚಣಿ.... (ಉಸುರ್ಗರೆದು) ನಾರಾಯಣಾ, ನರಹರೀ, ಸಾಕೀ ಸಂಸಾರ!.. ಇನ್ನು ಕಾಶೀ–ರಾಮೇಶ್ವರ ಯಾತ್ರೆಗೆ ಹೋಗಬೇಕು ಅಂತ ಮಾಡೀನಿ... ನನಗ ನಿನ್ನ ಬಡ್ಡೀನೂ ಬೇಡ... ಕೊಡತಿದ್ದರೆ ಗಂಟಿಗೆ ಗಂಟನೆ ತಿರುಗಿ ಕೊಡು, ಇಲ್ಲಾ ಅಂದರೆ ಆ ಸಾಮಾನ ಮಾರಿಕೊಂಡು ಹೊರಟೆ ನಾ ಕಾಶೀ ಯಾತ್ರೆಗೆ—

**ಧರೆಪ್ಪ**:— (ಹತಾಶನಂತೆ) ಇಲ್ರಿ, ಯಣ್ಣಾ, ಕೊಡತೀನ್ರಿ; ಕೊಡಲಾಕಂತೇ ಹೊಂಟಿದ್ನಿ ಅಂತ ಹೇಳಿದೆನಲ್ರಿ. . ಬೇಕಾದ್ರ ಗುಬ್ಬಿ ಹಾರೋದರಾಗ ತರತೀನ್ರಿ. . ಅದೇ ಹೇಳಿದೆನಲ್ರಿ ಯಾರೂ ಕುಲಕರ್ಣಿ ಯಂಕಪ್ಪನೋರು—

**ಮುದುಕ**:— ( ಬೇಜಾರದ ದನಿಯಲ್ಲಿ ) ಕುಲಕರ್ಣಿ ಯಂಕಪ್ಪ ಯಾಕ ಇರವಲ್ಲ, ತಿರುಪತಿ ಯಂಕಪ್ಪ ಯಾಕ ಬರವಲ್ಲ! ನನ್ನ ದುಡ್ಡು ನನಗ ಬೇಕು. ( ತನ್ನಷ್ಟಕ್ಕೆ ಎನ್ನುವಂತೆ ) ರಂಡೇ ಮಕ್ಕಳನ್ನ ತಂದು! ಬಡವ—ವ್ಯಾಳ್ಯಾಕ್ಕ ಸಹಾಯ ಮಾಡೋಣ—ಅಂದರೆ ಉಪಕಾರಬುದ್ಧೀನೇ ಇಲ್ಲ! ಸೀ ಬಡ್ಡಿಸಹಿತ ತಿರುಗಿ ಕೊಟ್ಟರ ನಿನ್ನಂಥಾ ಇನ್ನೊಂದು ಹತ್ತು ಮಂದಿ ಬಡವರಿಗೆ ಸಹಾಯ ಮಾಡೇನು.

**ಧರೆಪ್ಪ**:— ( ಸ್ವಲ್ಪ ಹತ್ತಿರ ಬಂದು, ಎಡಬಾಗಿಲಿನ ಕಡೆ ನೋಡುತ್ತ, ಮೆಲ್ಲನೆ) ಅಣ್ಣಾಅವ್ರ, ಅವರನ್ನ ನಿಂ ಕಡೀನೆ ಕರಕೊಂಡು ಬಂದೀನ್ರಿ. " ಧರೆಪ್ಪಾ, ಮನೆವಳಗ ನನ್ನ ತಂಗಿಯ ಮದಿವೆ ಮಾಡಬೇಕಾಗೇದ. ಒಂದೇ ಮಾತಿಗೆ ಕಟ್ಟ್ಯಾಗಿ ನಿಂತಿದೆ" ಅಂದರ್ರಿ. " ನನಗ ತಿಳೀತು ಬಿಡ್ರಿ, ಕುಲಕರ್ಣೇರ. ನಂ ಅಣ್ಣಾ ಅವ್ರ ಕಡೆ ನಡೀರಿ. ಯಾಳೇಕ್ಕ ಇಲ್ಲ ಅನವ್ರಲ್ಲ, ನಾಕ ಮಂದೀಗಿಂತ ಹೆಚ್ಚಿಗೆ ಕಾಡವ್ರಲ್ಲ" ಅಂತ ಹೇಳಿ ಕರಕೊಂಡು ಬಂದೀನ್ರಿ—

**ಮುದುಕ**:— (ನಡುವೆಯೆ) ಅದಾಯಿತೊ! ಅದನ್ನ ನೋಡಕೋತೀನಿ ನಾನು. ನಿನ್ನ ದುಡ್ಡಿನ ಮಾತು ಹೇಳು ಅಂದರೆ—

[ ' ಹಹ! ನಮಸ್ಕಾರ, ರಾಯರೆ ' ಎಂದು ಇಷ್ಟರಲ್ಲಿಯೆ ಎಡಬಾಗಿಲಿನಿಂದ ದನಿ ಕೇಳಬರುವುದು. ಅದರ ಹಿಂದಿನಿಂದಲೆ ತಲೆಗೆ ರುಮಾಲು, ಮೈಯಲ್ಲಿ ಉದ್ದವಾದ ಕರಿಯ ಕೋಟು. ಹಣೆಗೆ ಗೋಪೀಚಂದನದ ಭವ್ಯಮುದ್ರೆ— ಇವುಗಳಿಂದಲಂಕೃತನಾಗಿ ೨೫—೨೬ ವಯಸ್ಸಿನವನಾದರೂ ವಯಸ್ಕನಂತೆ ಕಾಣುವ ವ್ಯಕ್ತಿಯು ಬರುವುದು ].

**ಧರೆಪ್ಪ**:— ( ವ್ಯಕ್ತಿಯನ್ನು ನೋಡಿ ) ಬರ್ರಿ, ಕುಲಕರ್ಣೇರ. ನಿಮ್ಮದೆ ಮಾತ ಹೇಳತಿದ್ದೆ.

**ಮುದುಕ**:— ನಮಸ್ಕಾರ. ಬರ್ರಿ. ಕೂತುಕೊಳ್ಳಿ. ( ಬಲಬದಿಯ

ಬಾಗಿಲನ್ನು ನೋಡುತ್ತ ) ಅಡಿಗೆ ತಯಾರಿ ನಡೆದೇ ಬಿಟ್ಟಿತೇನೊ! ಹೊಗೆಯ ಕಾಟ! ಹೊರಗೇ ನನ್ನ ಕಚೇರಿ-ಕೋಣೆಯೊಳಗ ಕೂಡೋಣಂತೆ ಕೂತುಕೊಳ್ಳಿ, ನಾನು ಶರ್ಟ್ ಹಾಕಿಕೊಂಡು ಬರತೀನಿ. (ಬಲಬದಿಗೆ ಹೊರಡುವನು).

[ ಅವೇ ಬದಿಯಿಂದ ಯಾವುದರ ಕಡೆಗೂ ಲಕ್ಷವಿಲ್ಲದೆ ಪುಟ್ಟು ಬರುವನು. ಎರಡೂ ಕೈಗಳಲ್ಲಿ ಸಾಸರ(ಬಸಿ) ಗಳಲ್ಲಿಟ್ಟ ಎರಡು ಚಹದ ಕಪ್ಪುಗಳನ್ನು ಹಿಡಿದುಕೊಂಡು ತನ್ನಷ್ಟಕ್ಕೆ ತಾನು ಹಾಡುತ್ತಲಿದ್ದಾನೆ: 'ಮುಡಿ ಮುಡಿ ಮುಡಿ ಎಂದು ಮೂರ್ನಾರು ಹಾರತೀ ! ಮುಡಿ ಎಲ್ಲಿಂದ ಬಂತೊ ಪಿಕ—' ತಂದೆಯನ್ನು ನೋಡಿ ಒಮ್ಮೆಲೆ ಸುಧಾರಿಸಿಕೊಳ್ಳುತ್ತ 'ಪಿಕ-ಪಿಕ'—ಅಲ್ಲ-'ಶುಕವೆಂಬ ಪಕ್ಷಿ ಸಾರತೈತಣ್ಣ' ಎಂದು ಹಲ್ಲು ಕಿರಿಯುವನು].

**ಮುದುಕ**:— ( ಮೂಗು ಏರಿಸಿ ) ಹುಚ್ಚ ! ಎರಡು ಯಾಕೊ ?

**ಪುಟ್ಟು**.— ಅವ್ವ ಹೇಳಿದಳು—ಯಾರೊ ಬಂದಾರೆ ಅಂತ ( ಎಂದು ನೋಡುವಾಗ ವೆಂಕಪ್ಪನು ದೃಷ್ಟಿಗೆ ಬೀಳಲು ಒಮ್ಮೆಲೆ ಚಕಿತನಾಗಿ ಅವನನ್ನು ದಿಟ್ಟಿಸುತ್ತ ) ಎಲ—

**ವೆಂಕಪ್ಪ**:— ( ಮುದುಕನ ಬೆನ್ನು ತನ್ನ ಕಡೆಗಿದ್ದುದರಿಂದ ಅವನಗೆ ತಿಳಿಯದಂತೆ ಕೈಬೆರಳನ್ನು ಮೂಗಿನ ತುದಿಗಿಟ್ಟು ತುಟಿ ಮುಂದೆ ತಂದು ಪುಟ್ಟುವಿಗೆ ಸನ್ನೆ ಮಾಡುವನು).

**ಪುಟ್ಟು**:— ( ಮಾತನಾಡದೆಯೆ ಮೇಜಿನ ಕಡೆ ನಡೆಯುವನು. ಮುದುಕನು ಸಂಶಯದೃಷ್ಟಿಯಿಂದ, ಮಗನು ನಡೆದಂತೆ ತಿರು-ತಿರುಗಿ ನಿಂತು ನೋಡುವನು. ಪುಟ್ಟುವು ಒಂದು ಕಪ್ಪನ್ನು ಮೇಜಿನ ಮೇಲಿಡುತ್ತ ವೆಂಕಪ್ಪನಿಗೆ) ಕುಳಿತ್ಕೊಳ್ಳಿರಿ, ರಾಯರೆ. ಕುರ್ಚಿಯ ಮೇಲೆ (ಎಂದು ಕಪ್ಪನ್ನು ಅವನ ಮುಂದೆ ಸರಿಸಿಡುವನು).

**ವೆಂಕಪ್ಪ**:— ( ಕುಳಿತಲ್ಲಿಯೆ ನ್ಯೆಮುದುಡಿಕೊಳ್ಳುತ್ತ, ಹಲ್ಲು ಕಿರಿಯುತ್ತ) ಛೆ-ಛೆ-ಛೆ! ರಾಯರೆ, ಚಹಾ ನಾನು-ಅಂದರ-ನಾನು ಚಹಾ ಕುಡಿಯೊ-

**ಮುದುಕ**:— ( ನಡುವೆಯೆ ಮಗನನ್ನುದ್ದೇಶಿ ) ಏನ ಮಣ್ಣೊ ತಿಳಿಯೋದೇ ಇಲ್ಲ! ಅವರ ಮುಖಚರ್ಯೆ, ಮುದ್ರಾ, ತೇಜಸ್ಸು ಕಾಣತದೊ ಇಲ್ಲೊ? ಅಂಥಾ ಭಾವಿಕ ಮನುಷ್ಯರ ಮುಂದೆ ಚಹಾ ಇಡತಾನೆ!

**ಪುಟ್ಟು**:— (ಧರೆಪ್ಪನಿಗೆ)ನೀನು ಕುಡಿಯುವೆಯೇನು? (ಧರೆಪ್ಪನು ಹಿಂದೆ ಸರಿಯುವನು ).

**ಮುದುಕ**:— (ಸಿಟ್ಟಿನಿಂದ) ಆ ಕಪ್ಪು ಮುಟ್ಟಿಸೀಯೊ!

**ಪುಟ್ಟು**:— (ತಂದೆಗೆ) ಮುಟ್ಟಿಸೋದಿಲ್ಲ. (ಧರೆಪ್ಪನಿಗೆ) ನೀನು ಬೊಗಸೆ ಒಡ್ಡು, ನಾನು ಸುರುವತೀನಿ.

**ಧರೆಪ್ಪ**:— (ಹೆದರಿದವನಂತೆ ಹಿಂದೆ ಸರಿಯುತ್ತ) ಬ್ಯಾಡ್ರಿ—ಧಣೇರ—

**ಮುದುಕ**:— (ಗದ್ದರಿಸುತ್ತ) ಕುಡಿಯೋದಿಲ್ಲೊ ಅವನೂ!

**ಧರೆಪ್ಪ**:— ಹೌದರೆಪ.. ಇದೇ ಛಾದ ಅಂಗಡ್ಯಾಗ ಕುಡಿದು ಬಂದೀನ್ರಿ.

**ಪುಟ್ಟು**:— (ನಿರಾಶೆಯಿಂದ ಉಸುರ್ಗರೆದು) ಹಾಗಾದರ ಸುಮ್ಮ ಸುಮ್ಮನೆ ತ್ರಾಸ ಮಾಡಿಕೊಂಡೆನಲ್ಲ! ಇನ್ನು ಇದನ್ನ ಒಳಗೆ ಒಯ್ಯ ಬೇಕು!

**ವೆಂಕಪ್ಪ**:— (ಅವನನ್ನು ತಡೆಯುತ್ತ) ಛೆ—ಛೆ—ರಾಯರೆ, ಅಷ್ಟು ಯಾಕೆ ಶ್ರಮ? ನಾನು ಚಹಾ ಕುಡಿಯೋದಿಲ್ಲ ಅಂದರೆ ನನಗೆ ಅದರ ವಾಸ ಕೂಡಾ ತಡಿಯೋದಿಲ್ಲಾ ಅಂತ ಅಲ್ಲ.. ಒಯ್ದಿಟ್ಟೀರಂತೆ ಆ ಮೇಲೆ..ನೀವು ಕುಡಿಯಿರಿ ಮೊದಲು.. ಅಲ್ಲಿಯ ವರೆಗೆ ಮುಚ್ಚಿಡತೀನಿ. (ಎಂದು ಕಪ್ಪಿನ ಮೇಲೆ ಸಾಸರ-ಬಸಿ-ಮುಚ್ಚುವನು).

**ಮುದುಕ**:— (ಇದನ್ನೆಲ್ಲ ನೋಡಿ ಹೇಸಿದವನಂತೆ) ಏ, ಧರ್ಯಾ, ಹೊರಗ ನನ್ನ ಕಚೇರಿ—ಕೋಣೆಯೊಳಗ ಜಮಖಾನೆ ಹಾಸಿದೆ ಏನು ನೋಡು— ಹಾಸಿದ್ದಿಲ್ಲ ಅಂದರೆ ಹಾಸಿಡು (ಎಂದು ಬಲಬದಿಯ ಬಾಗಿಲಿನಿಂದ ಹೋಗುವನು. ಧರೆಪ್ಪನೂ ತಲೆತೂಗಿ ಎಡಬದಿಯ ಬಾಗಿಲಿನಿಂದ ಹೋಗುವನು. ಪುಟ್ಟುವು ತಂದೆ ಹೋದ ಕಡೆ, ವೆಂಕಪ್ಪನು ಧರೆಪ್ಪ ಹೋದ ಕಡೆ ದಿಟ್ಟಿಸಿ ನೋಡುತ್ತಿರುವರು; ಅವರಿಬ್ಬರೂ ಹೋದರೆಂದು ಕಂಡು ಒಬ್ಬನನ್ನೊಬ್ಬರು ನೋಡುವರು. ಮೊದಲು ಗಂಭೀರ, ಆ ಮೇಲೆ ಕುತೂಹಲದ ದೃಷ್ಟಿ; ಕೊನೆಗೆ ಖೊಳ್ಳನೆ ನಕ್ಕು ಕೂಡಲೆ ಬಾಯಿ ಮುಚ್ಚಿಕೊಂಡು ಮತ್ತೊಮ್ಮೆ ಒಳಕ್ಕೆ ನೋಡಿ ಕುರ್ಚಿಗಳನ್ನು ಹತ್ತಿರ-ಹತ್ತಿರ ಇಟ್ಟು ಕೊಂಡು ಕೂಡುವರು).

**ಪುಟ್ಟು**:— (ವೆಂಕಪ್ಪನನ್ನು ಒಂದೇಸವನೆ ದಿಟ್ಟಿಸಿ ನೋಡಿ, ನಮ್ರತೆಯ ಸೋಗಿನಿಂದ ಕೈಮುಗಿದು) ಏನು, ಸ್ವಾಮಿಯೇ, ಮನೆಯ ಗೋಡೆಗೆ ಸುಣ್ಣ-ಬಣ್ಣ ತುಂಬಾ ಒಡೆದು ಬಿಟ್ಟಿರುವಿರಿ! ಮನೆಯೊಳಗೆ ಏನಾದರೂ ಮದಿವೆ, ಸಮಾರಂಭ ಇದೆಯೇನು?

**ವೆಂಕಪ್ಪ**:— ಸುಮ್ಮ ಕೂಡು, ಮಹಾರಾಯಾ! ನನ್ನ ಸ್ವರೂಪ ಹೊರಗೆಡುಹಬೇಡ! ಇದೇ ಈಗ ಎಲ್ಲಿ ನೀನು good morning (ಗುಡ್ ಮಾರ್ನಿಂಗ) ಅನ್ನುವೆಯೊ ಅಂತ ಹೆದರಿದ್ದೆ. ನೀನು good morning ಅಂದಿದ್ದೆ ಅಂದರೆ, ನಾನೂ good morning ಅನ್ನುವ ಭರದೊಳಗೆ ತಲೆಯ ಮೇಲಿನ ರುಮಾಲೇ ತೆಗೆದುಬಿಡುತ್ತಿದ್ದೆ!. . . . ನೋಡತೀ ಏನು? ತಿಳಿಯ ಲಿಲ್ಲವೆ? ರುಮಾಲು ತೆಗೆದಿದ್ದೆ ಅಂದರೆ— ಒಳಗೆ ಕಾಮಧೇನುವಿನ ಬಾಲ ಅಂದರೆ ಸಾಕ್ಷಾತ್ ಚಂಡಿಕೆ ಇದ್ದಿಲ್ಲ! ಹುಃ! (ಎಂದು ನಕ್ಕು ನಡುಗಿಸುವನು).

**ಪುಟ್ಟು**:— ದೇಹದ evolution (ಪ್ರಗತಿ) ಆಗಿ ಬಾಲ ಹೋದಹಾಗೆ, ಬುದ್ಧಿಯು evolution ಆಗಿ ಚಂಡಿಕೆ ಹೋಯಿತು ಅಂತ ಹೇಳಬಹುದಲ್ಲ? (ಚಹವನ್ನು ಕುಡಿಯುವನು).

**ವೆಂಕಪ್ಪ**:— (ಸ್ಮರಣೆಗೆ ಬಂದು) ಆರಬಾರದೂ ಅಂತ ಮುಚ್ಚಿಟ್ಟಿದ್ದೆ ನಪ! (ಎನ್ನುತ್ತ ಬಸಿಯನ್ನು ತೆಗೆದಿಟ್ಟು) ಬರೋದರೊಳಗೆ— (ಎಂದು ಕಪ್ಪಿ ನಿಂದಲೆ ಚಹವನ್ನು ಗುಟಕರಿಸಿ ಮತ್ತೆ ಮೊದಲಿನಂತೆ ಬಸಿಯನ್ನು ಮುಚ್ಚಿಡುವನು).

**ಪುಟ್ಟು**:— (ನಗೆಯಿಂದ) ಈ ವೇಷ ಯಾಕೆ?— ಹೇಳಲಿಲ್ಲವಲ್ಲ?

**ವೆಂಕಪ್ಪ**:— (ಉಸಿರೆಳೆದು) ಉದರನಿಮಿತ್ತಂ ಬಹುಕೃತವೇಷಂ. . (ವಿಚಾರಿಸುವವನಂತೆ) ಮಾಡುವದೇನು? ಮನೆಯೊಳಗೆ ನನ್ನ ತಂಗಿ ಯೊಬ್ಬಾಕೆ ಬೆಳೆದು ನಿಂತಾಳೆ.

**ಪುಟ್ಟು**:— (ಆಶ್ಚರ್ಯದಿಂದ) ತಂಗಿ?

**ವೆಂಕಪ್ಪ**:— (ತಲೆದೂಗಿ) ತಂಗಿ. ಸಹೋದರಿ. ಒಡಹುಟ್ಟಿದಾಕೆ. ನನ್ನ ತರುವಾಯ ಜನ್ಮಿಸಿದಾಕೆ.

**ಪುಟ್ಟು**:— ಕಾಲೇಜದೊಳಗಿದ್ದಾಗ ‘ನನ್ನ ತಂದೆಗೆ ನಾನು ಒಬ್ಬನೇ ಮಗ’ ಅಂತ ಹೇಳತಿದ್ದಿಯಲ್ಲೊ?

**ವೆಂಕಪ್ಪ**:— (ತಲೆದೂಗುತ್ತ) ನಮ್ಮ ತಂದೆಗೆ ಮಗ ಒಬ್ಬನೆ; ನಮ್ಮ ಮನೆತನದೊಳಗ ಕಾಲೇಜ ಸೇರಿದವನೂ ನಾನು ಒಬ್ಬನೆ! ಆದರೇನು? ಮಗ ಒಬ್ಬನೆ ಎಂದ ಮಾತ್ರಕ್ಕೆ **ಮಗಳು** ಇಲ್ಲ ಅಂದ ಹಾಗೆ ಆಗಲಿಲ್ಲ ವಲ್ಲ? ಅಂತೂ ನನ್ನ ತಂಗಿ ಒಬ್ಬಾಕೆ ಇದ್ದಾಳೆ– ಪೀಡಾ!

**ಪುಟ್ಟು**:—(ತಿರಸ್ಕಾರದಿಂದ) ಹೀಡಾ! ಓಹೊಹೊ! ಹಣೆಗೆ ಮುದ್ರೆ ಒಡೆದುಕೊಂಡರೆ ಬುದ್ಧಿಗೆಯೆ ಹೀಗಮುದ್ರೆ ಒಡೆದ ಹಾಗೆ ಆಗುವುದೊ ಏನೊ! ಹೆಂಗಸಿನ ಜನ್ಮ ಅಂದರೆ ಹೀಡಾ ಅಂತೆ! ಇದನ್ನ ಹಳೆಯ ಗೊಡ್ಡುಗಳು ಹೇಳಬೇಕು, ನೀನು ಹೇಳೋದಲ್ಲ. ಹೆಂಗಸಿಗೇನು ಜೀವ ಇಲ್ಲವೆ?

**ವೆಂಕಪ್ಪ**:—(ಕಿವಿಮುಚ್ಚಿಕೊಳ್ಳುತ್ತ) ಪುಟ್ಟೂ—ಪುಟ್ಟೂ—ಪುಟ್—ಊ-ಊ! ಹೆಂಗಸಿಗೆ ಜೀವ ಇದೆ, ಹೆಂಗಸಿಗೆ ಟಾನೇಸುಮಾರಿ ಇದೆ, ಹೆಂಗಸರಿಗೆ ಎಲ್ಲಾ ಇದೆ—**ಗಂಡ ಒಬ್ಬ ಇದ್ದರೆ ಮಾತ್ರ.** ಅದಕ್ಕೆ ನನ್ನ ತಂಗಿಯ ಮದಿವೆ ಮಾಡಬೇಕಾಗದೆ. ವರ ಹುಡುಕಬೇಕು ಅಂದರೆ—ಈಗಿನ ಹುಡುಗರೆಲ್ಲ ಸ್ವೇಚ್ಛಾಚಾರಿಗಳು! ಕೆಲಸ ಇಲ್ಲದೆ ಮದಿವೆ ಮಾಡಿಕೊಳ್ಳೋದಿಲ್ಲ ಅಂತಾರೆ! ಅದಕ್ಕೆ ರಾಯರಕಡೆ ಒಂದೆ; ರಾಯರ ಮಗ ಏನೊ ತಂದೆಯ ಮಾತು ಮೀರೋದಿಲ್ಲ ಅಂತ ಕೇಳೇನಿ—

**ಪುಟ್ಟು**.—(ಅವಮಾನಿತನಾದವನಂತೆ) ಏ, ಇಲ್ಲಿ ನೋಡು, ನೀನು ಇಲ್ಲದ ತಮಾಷೆ ಮಾಡಿ ನನ್ನ ಮನೆಯೊಳಗೆ ಗಲಾಟೆ ಎಬ್ಬಿಸಬೇಡ. ನಿನಗೆ ತಂಗೀನೇ ಇಲ್ಲ, ನನಗೆ ಗೊತ್ತಿದೆ. ಅಷ್ಟಕ್ಕೆ ಬಂದರೆ ನಿನ್ನ ಸ್ವರೂಪ ಬೈಲಿಗೆಳೆದು ಬಿಡತೀನಿ.

**ವೆಂಕಪ್ಪ**:—(ಅವನನ್ನು ಒಟ್ಟಿಸುತ್ತ, ಮೆಲ್ಲನೆ ಕಿಸೆಯೊಳಗಿಂದ ಪತ್ರಗಳನ್ನು ತೆಗೆಯುತ್ತ) ಅಷ್ಟಕ್ಕೆ ಬಂದರೆ ನಾನೂ **ಇವನ್ನ** ಬೈಲಿಗೆಳೀತೀನಿ.. ನೋಡಿದೆಯಾ?..ನೀನು ಬರೆದ ಪ್ರೇಮಪತ್ರ!..ಯಾಕೆ ಸುಮ್ಮನಾದೆ?..ರಾಯರಿಗೆ ಹೇಳತೀನಿ ಅಂದೆ! 'ರಾಯರೆ, ಈ ಪ್ರೇಮಪತ್ರ ಅಂದರೆ ನಿಮ್ಮ ಮಗ ಪ್ರಬುದ್ಧ ಆದ ಅಂಬೋದರ ಪ್ರಮಾಣ ಪತ್ರ' ಅಂತ.

**ಪುಟ್ಟು**:—(ನಿರುತ್ತರನಾದರೂ ಹಟದಿಂದ) ನಾನು ಯಾರಿಗೆ ಆ ಪತ್ರ ಬರೆದಿದ್ದೆ ಅವರಂತೂ ನಿನ್ನ ತಂಗಿ ಎಂದಿಗೂ ಅಲ್ಲ.

**ವೆಂಕಪ್ಪ**:—ತಂಗಿ ಅಲ್ಲ.. ನನ್ನ ಹೆಂಡತಿ ಅನ್ನು.. ಕ್ರಿಮಿನಲ್ ಕೇಸು ಹಾಕತೀನಿ ನಿನ್ನಮೇಲೆ.

**ಪುಟ್ಟು**:—(ಹುಚ್ಚುನಗೆ ನಗುತ್ತ) ಹಹ! ತಿಳೀತು!

**ವೆಂಕಪ್ಪ**:— ನಿನಗೆ ಏನೂ ತಿಳಿದಿಲ್ಲ. .ಅವಳು ನನ್ನ ತಂಗಿ ಅಲ್ಲ, ನನ್ನ ಹೆಂಡತೀನೂ ಅಲ್ಲ. .ಅವಳು ಕಾಲೇಜಿನಲ್ಲಿ ನಿನ್ನ ಹಾಗೆ ನನಗೂ ಗೆಳತಿಯಾಗಿದ್ದಳು... ನೀನು ಪತ್ರ ಬರೆದೆ. .ನಾನೂ ಪತ್ರ ಬರೆಯ ಬಹುದಾಗಿತ್ತು—ಆದರೆ ಮೊದಲೇ ನನಗೆ ಗೊತ್ತಿತ್ತು.

**ಪುಟ್ಟು**:— (ನಡುವೆಯೆ) ನಾನು ಬರೆದೆ ಅಂತ, ಅಲ್ಲವೆ? ಅದಕ್ಕೆ ನೀನು ಬರೆಯಲಿಲ್ಲ?

**ವೆಂಕಪ್ಪ**:— ಅಲ್ಲ. .ಮೊದಲೇ ನನಗೆ ಗೊತ್ತಿತ್ತು ಆಕೆ ಬಾಲವಿಧವೆ ಅಂತ.

**ಪುಟ್ಟು**:— (ಸಿಡಿಲು ಬಡಿದಂತೆ) ಆಂ?

**ವೆಂಕಪ್ಪ**:— ಬಾಲವಿಧವೆ. ಆದರೆ ಮಾಡುವುದೇನು? ಆಕೆಯ ಬರಿಯ ಹಣೆ ನಿನ್ನ ಹಣೆಬರಹ ಆಯಿತು. (ಉಸುರ್ಗರೆಯುವನು).

**ಪುಟ್ಟು**:— (ಸಂಶಯದಿಂದ) ವಿಧವಾವಿವಾಹ ನಿನಗೂ ಸಮ್ಮತ ಇಲ್ಲವೆ?

**ವೆಂಕಪ್ಪ**:— ಆದರೆ ನಿನ್ನೊಡನೆ ಪತ್ರವ್ಯವಹಾರ ಮಾಡಿದ ಈ ವಿಧವಾನ ಕೂಡ ವಿವಾಹ ನನಗೆ ಹೇಗೆ ಸಮ್ಮತ ಆದೀತೊ? ಇಷ್ಟೆಲ್ಲ ಯಾಕೆ? ನೀನು ಬರೆದ ಪತ್ರ ಮಂದಿಯ ಕಣ್ಣಿಗೆ ಬಿದ್ದದ್ದರಿಂದ ಈಗ ಮದಿವೆಯ ಹೊರತು ಆಕೆಗೆ ಬೇರೆ ಉಪಾಯನೆ ಇಲ್ಲದಂತಾಗಿದೆ.

**ಪುಟ್ಟು**:— (ಸಂತೋಷ ತೋರಿಸುತ್ತ) ಹಾಗಾದರೆ ಮದಿವೆಯನ್ನೆ ಮಾಡಿಕೊಳ್ಳಲಿ? ಸ್ತುತ್ಯ ಉಪಕ್ರಮ! ಇದಕ್ಕೆ ನನ್ನ ಸಂಪೂರ್ಣ ಸಹಾನುಭೂತಿ ಇದೆ.

**ವೆಂಕಪ್ಪ**:— (ಅಸಹನೆಯ ದನಿಯಲ್ಲಿ) ಇದಕ್ಕೆ ಬೇಕಾದದ್ದು ನೀನು, **ಖುದ್ದ ನೀನು**, ನಿನ್ನ ಸಹಾನುಭೂತಿಯಲ್ಲ. ನಿನ್ನ ಕೂಡ ಪತ್ರ ವ್ಯವಹಾರ ಮಾಡಿ ಇನ್ನೊಬ್ಬನ ಕೂಡ ಮದಿವೆ ಮಾಡಿಕೋ ಅನ್ನುವೆ ಏನು ಆಕೆಗೆ? ಅದೇನೂ ಇಲ್ಲ—ನಿನ್ನ ತಂದೆಯವರ ಸಮ್ಮತಿ ಪಡೆದು ಕೊಳ್ಳಲಿಕ್ಕೆ ಬಂದೀನಿ—ಈ ವೇಷದಿಂದ.

**ಪುಟ್ಟು**:— (ನಗುತ್ತ) ಹುಚ್ಚ! ವಿಧವಾಪುನರ್ವಿವಾಹಕ್ಕೆ ನನ್ನ ತಂದೆಯವರು ಸಮ್ಮತಿ—

**ವೆಂಕಪ್ಪ**:— ( ನಡುವೆಯೆ ) ವಿಧವಾ ಅಂತ ಅವರಿಗೆ ಯಾಕೆ ಹೇಳ ಬೇಕು ? ನಾನಂತೂ ಆ ಮಾತನ್ನೆ ಎತ್ತೋದಿಲ್ಲ. ( ಒಮ್ಮೆಲೆ ಎದುರು ಒಳಗೆ ನೋಡಿ ಗಂಭೀರಮುದ್ರೆಯಿಂದ ತನ್ನ ಮುಂದಿದ್ದ ಕಪ್ಪನ್ನು ಪುಟ್ಟೂನ ಮುಂದೆ ಸರಿಸಿಟ್ಟು ) ಅಂತೂ ಒಂದೇ ವೇಳೆಗೆ ನೀವು ಎರಡು ಕಪ್ಪು ಚಹಾ ಕುಡಿಯುವಿರಲ್ಲ ?

**ಪುಟ್ಟು**:— ( ತಿಳಿಯದೆ ) ಏನು ? ( ವೆಂಕಪ್ಪನು ನೋಡುವತ್ತ ನೋಡಲು ತನ್ನ ತಂದೆ ಕೋಟು–ರುಮಾಲುಗಳನ್ನು ತೊಟ್ಟು ಕಿಸೆಗಳಲ್ಲಿ ಏನನ್ನೋ ಹುಡುಕುತ್ತ ಬರುವುದು ಕಾಣುವುದು ).

**ವೆಂಕಪ್ಪ**:— (ಮುದುಕನಿಗೆ) ನಿಮ್ಮ ಚಿರಂಜೀವರ ಸ್ವಭಾವ ಬಹಾಳ ವಿನೋದದ್ದು ನೋಡಿರಿ. 'ಹಿಂದಿನವರಿಗೆ ಒಂದೇ ವೇಳೆಗೆ ಎರಡು ಹೆಂಡಂದಿರನ್ನು ಮಾಡಿಕೊಳ್ಳೋದು ಎಷ್ಟು ಸುಲಭ, ಅಷ್ಟೆ ಇಂದಿನವ ರಿಗೆ ಎರಡು ಕಪ್ಪು ಚಹ ಕುಡಿಯೋದು ಸುಲಭ' ಅಂತಾರೆ! ಹ ಹ!

**ಮುದುಕ**:— ( ಮಾತಿನ ಕಡೆ ಲಕ್ಷವಿಲ್ಲದೆ ಇನ್ನೂ ಹುಡುಕುತ್ತ ಕೊನೆಗೆ) ಹಂ— ಸಿಕ್ಕಿತು ( ಎಂದು ಕನ್ನಡಕಗಳನ್ನು ತೆಗೆದು ಕಣ್ಣಿಗಿಡುವನು. ಕೂಡಲೆ ಬಾಯ್ದೆರೆಯುವನು. ಎರಡೂ ಕಾಜುಗಳಿರುವಲ್ಲಿ ಎರಡು ತೊಗಲಿನ— ಅದೇ ಆಕಾ ರದ-ಪಟ್ಟಿಗಳಿವೆ ! ) ಏನು–ಏನಿದು ?

**ಪುಟ್ಟು**:— ( ಏಳುತ್ತ ) 'ಮೊನ್ನೆ ಸಂಧ್ಯಾವಂದನ ಮಾಡುವಾಗ ಮಣಿ ಒಡೆದಿದರು' ಅಂತ ಅಪ್ಪ ಹೇಳಿದಳು—ಅದಕ್ಕೆ ಮಡಿಯೊಳಗೆ ಬರಲಿ ಅಂತ ಕಾಜು ತೆಗೆದು ಎರಡು ಕೃಷ್ಣಾಜಿನ ಪಟ್ಟಿ ಹಾಕಿಸಿದೆ ( ಎಂದು ಎರಡೂ ಕಪ್ಪುಗಳನ್ನು ತೆಗೆದುಕೊಂಡು ಲಗುಬಗೆಯಿಂದ ಬಲಬದಿಯ ಬಾಗಿಲಿನಿಂದ ಹೋಗುವನು ).

[ ಮುದುಕನು ಕೆಲಹೊತ್ತು ಸ್ತಂಭೀಭೂತನಾಗಿ ನಿಲ್ಲುವನು. ವೆಂಕಪ್ಪನು ನಗೆ ತಡೆಯುವ ಮತ್ತು ಗಂಭೀರ ಮುದ್ರೆಯನ್ನು ತಾಳುವ ಯತ್ನದಲ್ಲಿರುವನು. ಕೊನೆಗೆ—]

**ವೆಂಕಪ್ಪ**:— ( ಸಂತಯಿಸುವ ನಗೆಯಿಂದ ) ಅಲ್ಲ, ರಾಯರೆ, ಹೋಗಲಿ ಬಿಡಿರಿ. ಹೇಳಿದೆನಲ್ಲ ಇದೇ ಈಗ—ನಿಮ್ಮ ಚಿರಂಜೀವರು ಬಹಾಳೇ ವಿನೋದ ಬುದ್ಧಿಯವರು ಅಂತ ?

**ಮುದುಕ**:— ( ಉದ್ವಿಗ್ನನಾಗಿ ) ವಿನೋದಬುದ್ಧಿಯಲ್ಲ ಇದು. ( ನಿದ್ದೆಯಲ್ಲಿ ನಡೆವಂತೆ ಕುರ್ಚಿಯ ಹತ್ತಿರ ನಡೆದು ಬಂದು ) ಶುದ್ಧ ದುರ್ಬುದ್ಧಿ ಇದು !

(ಹತಾಶನಂತೆ ಕುರ್ಚಿಯಲ್ಲಿ ಕೂಡ್ರುತ್ತ) ವಿನೋದಬುದ್ಧಿ ಅಲ್ಲ ಇದು! (ಕನ್ನಡಕವನ್ನು ನೋಡುತ್ತ) ಯಾವ ಜಬಾಬ್ದಾರೀನೇ ಇಲ್ಲ! (ಉದ್ದವಾಗಿ ಉಸಿರೆಳೆದು) ನಾರಾಯಣಾ, ನರಹರೀ, ಎಂದು ನೀಗಿಸುವೆಯಪ್ಪ ಇದನ್ನ! (ಕೆಲಹೊತ್ತು ಆಕಾಶವನ್ನು ದಿಟ್ಟಿಸಿ ಮತ್ತೆ ಭೂಮಿಗಿಳಿದು) ನಿಮ್ಮ ಕೆಲಸ ಸರ್ವಸಾಧಾರಣ ಮಾಡಿ ಬಿಡೋಣ. ಯಾಕೆಂದರೆ—ಕಾಗದ-ಪತ್ರ ಬರೆದು, ಸಹಿ ಮಾಡೋದು—ನೋಡೋದು ಅಂದರೆ ನನಗೆ ಕನ್ನಡಕ ಬೇಕು.

**ವೆಂಕಪ್ಪ**:—(ಚಕಿತನಾದವನಂತೆ) ಕಾಗದ--ಪತ್ರ?

**ಮುದುಕ**:—('ಖಂಡತುಂಡ' ಎಂಬ ದನಿಯಲ್ಲಿ) ರಾಯರೆ—

**ವೆಂಕಪ್ಪ**:—(ನಡುವೆಯೆ ಹಲ್ಲು ಕಿರಿಯುತ್ತ) ನಾವು ರಾಯರಲ್ಲ. ಹಹ! ನಾವು ಆಚಾರ್ಯರು. ಹಹಹ!

**ಮುದುಕ**:—(ಅಸಹನೆಯಿಂದ) 'ರಾಯರೆ' ಅಂದರೆ ವ್ಯವಹಾರೇನು ತಡೆಯೋದಿಲ್ಲಲ! ಮೊದಲೇ ಕಾಗದ-ಪತ್ರ ಮಾಡಿಸೋದು ಯಾವಾಗಲೂ ನನ್ನ ಸ್ವಭಾವ. ಮುಂದೆ ತಕರಾರು-ತಾಕ್ಯಾಟ ಬೇಡ.

**ವೆಂಕಪ್ಪ**:—ಆಗಲಿ—ಕಾಗದ-ಪತ್ರ ಮಾಡೋಣ.

**ಮುದುಕ**:—(ಹಟದ ದನಿಯಲ್ಲಿ) ಅದನ್ನೆ ಮಧ್ಯಾಹ್ನದೊಳಗೆ ಇಲ್ಲಾ ಮತ್ತೆ ಯಾವಾಗಲಾದರೂ ಮಾಡೋಣಾ ಅಂದೆ. ನನಗೆ ಕನ್ನಡಕ ಬೇಕು ಅಂದೆ. (ಎಡ ಬಾಗಿಲ ನೋಡುತ್ತ ಒದರಿ) ಧರೆಪ್ಪಾ, ಧರ್‍ಯಾ—ಏ-ಧರ್‍ಯಾ—

**ಧರೆಪ್ಪ**:—(ಲಗಬಗೆಯಿಂದ ಬಂದು) ಬಂದಿನ್ರಿ, ಅಣ್ಣಾ ಅವ್ರು.. ಮೊದಲು ಹಾಸಿದಿನ್ರಿ ಜಮಕಾಣಿ, ಅಟರಾಗ ಒಂದು ಬಾಜು ಹರಿದಿತ್ರಿ—'ಎಲ, ಶಿವನ, ಮೊನ್ನೆಮೊನ್ನೆ ತಂದ ಜಮಕಾಣಿ, ಈಟರಾಗೇ ಹರೀತು ಹ್ಯಾಂಗಪಾ', ಅಂತ ಏ (ಎಷ್ಟೊ) ಟೊತ್ತು ಕೆಟ್ಟ ಅನಿಸಿ ಕಣ್ಣಿಗೆ ಕತ್ತಲೆ ಬಂಧಾಂಗ ಆಗಿ ನಿಂತು ಬಿಟ್ಟಿನ್ರಿ—

**ಮುದುಕ**:—(ನಡುವೆಯೆ) ಕಣ್ಣಿಗೆ ಕತ್ತಲೆ ಬಂದರೆ ಕಿವಿ ಕೇಳಿಸೋದೊ ಇಲ್ಲೊ? ನಾನು ಏನು ಹೇಳತೀನಿ ಅದನ್ನ ಕೇಳಿಕೋಬೇಕೊ,

ಏನು 'ಜಮುಕಾಣಿ, ಜಮುಕಾಣಿ–' ಅಂತ— (ಒಮ್ಮೆಲೆ ತಡೆದು) ಹುಚ್ಚುಂಡೆದನ್ನ ತಂದು! ಹಂ— ಇದು ನೋಡು— ಇದನ್ನ (ಕನ್ನಡಕವನ್ನು ಕೊಡುತ್ತ) ಹಿಡಿ ಇದನ್ನ. ಅದನ್ನ ಒಗೆದಿ ಅಂದರೆ ನೋಡು— ಕಣ್ಣಿಗೆ ಕಡೆತನಕ ಕತ್ತಲೆ ಬರುವ ಹಾಗೆ ಮಾಡೇನು!— ಹಂ. ಹಿಡಿ.. ಇದನ್ನು ತಕ್ಕೊಂಡು— ಆ ಹುಣಸೇಮರದ ಹನುಮಾನ್‌ದೇವರು ಗೊತ್ತಿದೆಯೇನು ನಿನಗೆ?— ಹಂ— ಅಲ್ಲಿ ಹೋಗಿ 'ಕಣ್ಣಿನ ಕೃಷ್ಟಪ್ಪ' ಎಲ್ಲಿ ಇರತಾರಂತ ಕೇಳು—

**ಧರೆಪ್ಪ:**— (ಸಂಶಯದಿಂದ) ಆ ಹುಣಸೆಗಿಡ ಮಾತು ಒಡನುಡಿತೈತೇನ್ರೀ?

**ಮುದುಕ:**— (ಸಿಟ್ಟಿನಿಂದ) ಮಾತು ಒಡನುಡಿಯೋದಿಲ್ಲ—ನಿನ್ನ ತಲೆ ಒಡೀತದೆ! ಧಡ್ಡ! ಅಲ್ಲಿ ಯಾರಿಗಾದರೂ ಕೇಳು—ನಿನ್ನಂಥವರಿಗಲ್ಲ–ತಲೆ ಇದ್ದವರಿಗೆ—'ಕಣ್ಣಿನ ಕೃಷ್ಟಪ್ಪ' ಎಲ್ಲಿ ಇರತಾರಂತ. ಅವನಿಗೆ ಹೇಳು— ಮಧ್ಯಾಹ್ನದಷ್ಟೊತ್ತಿಗೆ—ಇಲ್ಲಾ ನೀನೇ ಅಲ್ಲಿ ಕೂತು ಮಾಡಿಸಿಕೊಂಡೇ ಬಾ—ನಾ ಹೇಳೀನಿ ಅಂತ ಹೇಳು. ಅವೆರಡೂ ಕಾಜು ಹಾಕಿಸಿಕೊಂಡು ಬಾ.

**ಧರೆಪ್ಪ:**— ಕಾಜ–ರಿ? ಬಿಳೀವ್ರಿ ಏನು ಬಣ್ಣದ–ರಿ?

**ಮುದುಕ:**— (ಅಸಹನೆಯಿಂದ) ಹೋಗೊ! ಬೃಹಸ್ಪತಿಯು ಹೋಳೀ ಹುಣ್ಣಿಮೆ! ಅವನಿಗೆಲ್ಲಾ ಗೊತ್ತಿದೆ ಹೋಗು. ನಾನೇ ಹೇಳೀನಿ ಅಂಥೇಳು.

**ಧರೆಪ್ಪ:**— ಹೂಂನ್ರಿ. (ಹೋಗುವಾಗ) ಇದಕ್ಕ ಭಾಳೊತ್ತ ಹಿಡಿದ್ರ– ಆ ಇದನ್ನ ಮಧ್ಯಾಣದಾಗ ತಂದು ಕೊಡತೀನ್ರಿ? (ಮುದುಕನು ತನ್ನನ್ನು ಕೆಕ್ಕರಿಸಿ ನೋಡಲು) ಬೇಕಾದ್ರ ಅಟರಾಗೇ ಹೋಗಿ ತಂದು ಬಿಡತೀನ್ರಿ. (ಹೋಗುವನು).

**ವೆಂಕಪ್ಪ:**— ನಿಮ್ಮ ಆಳು–ಮನುಷ್ಯ ಏನು ಇವ?

**ಮುದುಕ:**— (ನಕ್ಕು) ಆಳು–ಮನುಷ್ಯ ಏನು ಅಲ್ಲ. ಹೀಗೇ ಮೊದಲಿನಿಂದ ಪರಿಚಯ. ಯಾವಾಗ—ಯಾವಾಗಲಾದರೂ ಬಂದು

ಸಣ್ಣ–ಪುಟ್ಟ ಕೆಲಸ ಮಾಡಿ ಕೊಡತಿರತಾನ. ಹೋದಾಗ ಬಂದಾಗ ನಾನೂ ಅದಷ್ಟು ಸಹಾಯ ಮಾಡತಿರತೀನಿ. ಬಡವ ರಂಡೇಮಗ! ಸ್ವಭಾವನೂ ಸಾಧಾರಣ ನೆಟ್ಟಗೇ ಇದೆ. ನಾನೂ ಏನಾದರೂ ಕೈಯಿಂದೆತ್ತಿ ಹಿಡಿಯೊ ಅಂತ ೪–೬ ಆಣೆ ಕೊಟ್ಟರೆ–ಉಹುಂ!—'ಒಯ್ಯೋದಿಲ್ಲ' ಅಂತಾನೆ! 'ಬೇಕಾದರ ಸಾಲ ಅಂತ ಕೊಡಿರಿ, ಒಯ್ಯತೀನಿ' ಅಂತಾನೆ! ಇವನಿಗೆ ಸಾಲ ಕೊಟ್ಟು ನಾನು ಸಾಹುಕಾರ ಆಗಬೇಕು! ಈಗ ಒಯ್ದದ್ದನೆಲ್ಲ ಸಾಲ ಅಂತ ತನ್ನಷ್ಟಕ್ಕೆ ತಾನೇ ಲೆಕ್ಕ ಕೂಡಾ ಮಾಡಿಟ್ಟಾನೆ! (ನಗೆಯಿಂದ) ಅವನ ಲೆಕ್ಕದ ಪ್ರಕಾರ ಸಾಲದ ಮೂರುಪಟ್ಟು ಬಡ್ಡಿ ಗುಣಿಸಿಟ್ಟಾನೆ! ಪಾಪ! ಆಯಿತು–ಅವನಿಗೆ ಸಮಾಧಾನ ಆಗತಿದ್ದರೆ ನಾನಾದರೂ ಅಷ್ಟು ಹಟ ಯಾಕೆ ಹಿಡಿಯಬೇಕು ಅಂತ ಲಕ್ಷ್ಯಕ್ಕೆ ತಂದುಕೊಂಡಿಲ್ಲ. . (ಉಸುರ್ಗರೆದು) ಒಮ್ಮೊಮ್ಮೆ ಅನಿಸತದೆ—ಕಾಶೀ–ರಾಮೇಶ್ವರ ಅಂತ ಊರೂರ ಅಲೆದಾಡೋದಕಿಂತ ಇದ್ದಲ್ಲೇ ಬಡವರಿಗೆ ಸಹಾಯ ಯಾಕೆ ಮಾಡಬಾರದು ಅಂತ!

**ವೆಂಕಪ್ಪ:**— (ನಯ-ಭಯ-ಭಕ್ತಿಗಳನ್ನು ತೋರಿಸಿ ತಲೆದೂಗುತ್ತ) ನಾನೂ ಕೇಳೀನಿ; ರಾಯರೆ, ತಮ್ಮ ಸ್ವಭಾವದ ಗುಣ–ವರ್ಣನೆ ಕೇಳೀಸಂತೆಯೆ ತಮ್ಮ ಕಡೆ ಬಂದನ್ನು. ನಾನೂ ಬಹಾಳ ಪೇಚಿನಲ್ಲಿ ಸಿಕ್ಕಿಕೊಂಡೀನಿ.

**ಮುದುಕ:**— (ತತ್ವಜ್ಞಾನಿಯಂತೆ) ಪೇಚು! ಪೇಚು! ಅಂದರೇನು? ಸಂಸಾರದೊಳಗೆ ಬಂದ ಮೇಲೆ ತಾಪತ್ರಯ ಬಿಟ್ಟೀತು ಹೇಗೆ? ಈಗ ನೋಡಿರಿ— ದಿನಾಲು ನಾನು ಬೆಳಗಿನ ಆಹ್ನಿಕ ಮೂರ್ರ್ಮೂರು ತಾಸು ಮಾಡದಿದ್ದರೆ ಮನಸ್ಸಿಗೆ ಶಾಂತೀನೇ ಅನಿಸೋದಿಲ್ಲ. ಈಹೊತ್ತು ಅಷ್ಟರೊಳಗೆಯೆ ನಮ್ಮ ಧರ್ಮ್ಯಾ ಬಂದ. 'ಅಣ್ಣಾ ಅವ್ರು, ಹೀಂಘೀಂಗ ನಮ್ಮ ಕುಲಕರ್ಣೇರು ಪೇಚಿನಾಗ ಸಿಕ್ಕಾರ' ಅಂದ. ಆಯಿತು. 'ನರಹರೀ, ನಿನಗೆ ಕೈಮುಗಿಯೋದೂ ಅಷ್ಟೆ, ನಿನ್ನ ಭಕ್ತರಿಗೆ ಕೈಯಿಂದ **ನೀಡೋದು ಅಷ್ಟೆ**. ಕ್ಷಮಿಸು ನನ್ನ' ಅಂದೆ, ಚಟ್ಟನೆ ಎದ್ದೆ, ಇಲ್ಲಿ ಬಂದು ಕೂತು ಬಿಟ್ಟೆ—ನಿಮ್ಮ ಎದುರು.

**ವೆಂಕಪ್ಪ:**— (ನೊಂದವನಂತೆ) ಎಲೆಲೆಲೆಲೆಲೆಲೆಲೆ—! ನಿಮ್ಮ ಸಂಧ್ಯಾ

ವಂದನಕ್ಕೆ ತೊಂದರೆ ಕೊಟ್ಟು ಎಂಥಾ ಪಾಪ ಕಟ್ಟಿಕೊಂಡೆ ನಾನು ಅಂತೀನಿ!

**ಮುದುಕ**:— ( ಉಸುರ್ಗರೆದು ) ಅದಕ್ಕೇ ಹೇಳಿದೆನಲ್ಲ—ಪೇಚು ಅಂದರೆ ನಡೆಯೋದು ಹೇಗೆ ಅಂತ? ಆಗಲಿ. . ನಿಮಗೂ ಮತ್ತೆ ಬರುವ ಹೋಗುವ ತ್ರಾಸ ಯಾಕೆ? ಕಾಗದ—ಪತ್ರಾನೂ ಈಗೇನೆ ಮಾಡಿ ಬಿಡೋಣ.

**ವೆಂಕಪ್ಪ**:— ಅಲ್ಲ—ಕಾಗದ—ಪತ್ರ ಆದರೂ ಯಾಕೆ ಅಂತೀನಿ. ನಾವು ಕೊಡುವವರು, ನೀವು ಕೊಂಬು ( ಕೊಳ್ಳು )ವವರು.

**ಮುದುಕ**:—( ಸಂದರ್ಭ ತಿಳಿಯದೆ ) ಅಂದರೆ—ಅಲ್ಲ—ನಿಮಗೆ ಏನೇನು ಎಷ್ಟೆಷ್ಟು ಬೇಕು—ಅದರ ಮೇಲೆ ಅವಲಂಬಿಸಿದೆ.

**ವೆಂಕಪ್ಪ**:— ನಾನೇನೂ ಹೆಚ್ಚಿಗೆ ಬೇಡೋದಿಲ್ಲ. ನೀವೇ ಇಷ್ಟು ಅಂತ ಹೇಳಿಬಿಡಿರಿ.

**ಮುದುಕ**:— ನಿಮಗೆ ಎಷ್ಟು ಬೇಕು ಅಂಬೋದನ್ನ ಹೇಳಿಬಿಡಿರಿ— ಅಂದರೆ—

**ವೆಂಕಪ್ಪ**:— ( ಚಕಿತನಾದವನಂತೆ ) ನನಗೆ ಎಷ್ಟು ಬೇಕು! . . . ಛೆ—ಛೆ— ರಾಯರೆ—ಅದು ಶಾಸ್ತ್ರಕ್ಕೆ ವಿರುದ್ಧ. . ( ತಡೆದು ವಿಚಾರಿಸಿದವನಂತೆ ) ಅಥವಾ ಬಡವನ ಮೇಲೆ ಉಪಕಾರನೆ ಮಾಡಬೇಕು ಅಂತ ನೀವು ಅಂತಿದ್ದರೆ— ಅನಿವಾರ್ಯ. . ಶಾಸ್ತ್ರಾತ್ ರೂಢಿರ್ಬಲೀಯಸೀ.

**ಮುದುಕ**:— ( ತಿಳಿಯದೆ ) ಶಾಸ್ತ್ರ? ಕೊಡ—ಕೊಳ್ಳುವ ವ್ಯವಹಾರಕ್ಕೆ ಶಾಸ್ತ್ರ ಯಾಕೆ?

**ವೆಂಕಪ್ಪ**:— ನಾನೂ ಅದನ್ನೆ ಅಂತಿರತೀನಿ. ಕೊಡಬೇಕು ಅಂತ ಶಾಸ್ತ್ರ ಇಲ್ಲ, ಹಟ ಹಿಡಿದು ಬೇಡಬೇಕು ಅಂತಲೂ ಶಾಸ್ತ್ರ ಇಲ್ಲ. ಆದರೂ ರೂಢಿ ಹೇಗಿದೆ ನೋಡಿರಿ? ಮನೆಯೊಳಗೆ ಗುಬ್ಬಿ ಗೂಡು ಕಟ್ಟಿದ ಹಾಗೆ ಬೆಳೆದಿದೆ. ಬೆಳೆಯಗೊಟ್ಟರೂ ಹೊಲಸ, ತೆಗೆಯಬೇಕೆಂದರೂ ಹೊಲಸ. . . . ಹಾಗಾದರೆ—ಆಗಲಿ—ನನಗೂ ಹೆಚ್ಚಿಗೇನು ಬೇಡುವ ಇಚ್ಛೆ ಇಲ್ಲ. . . ಅಂದರೆ ೨೦೦೦ ಕೊಟ್ಟುಬಿಟ್ಟರೆ—

**ಮುದುಕ:**— ೨೦೦೦! (ವಿಚಾರಿಸಿ) ಆಗಬಹುದು..ಅಂ... ಎಷ್ಟು ವರ್ಷ ಅಂತ ತಿಳಿದರೆ—

**ವೆಂಕಪ್ಪ:**— ಬೇಕಾದರೆ ೧ಳ ಅನ್ನಿರಿ, ಬೇಕಾದರೆ ೧೮ ಅನ್ನಿರಿ.

**ಮುದುಕ:**— (ಒಮ್ಮೆಲೆ) ಛೆ–ಛೆ–ಛೆ–ಛೆ..ಅದು ಬಹಾಳ ಆಯಿತು!

**ವೆಂಕಪ್ಪ:**— ಹಾಗಾದರೆ ೧ಳರ ಒಳಗೇ ಏನಾದರೂ ಅಂದುಕೊಳ್ಳಿರಿ.

**ಮುದುಕ:**— ಅದನ್ನ ನೋಡೋಣ—ನಮ್ಮ ಅನುಕೂಲ ಹೇಗೆ ಅಂಬೋದನ್ನ.

**ವೆಂಕಪ್ಪ:**— (ಒಮ್ಮೆಲೆ ಏನೊ ಸ್ಮರಣೆಗೆ ಬಂದವನಂತೆ) ಹಂ–ಅನುಕೂಲ ಅಂದ ಕೂಡಲೆ ಒಂದು ಮಾತು ನೆನಪಿಗೆ ಬಂತು...ಆದಷ್ಟು ಬೇಗ ಮುಹೂರ್ತ ಒಂದು ನೋಡಿಬಿಟ್ಟರೆ—

**ಮುದುಕ:**— (ಚಕಿತನಾಗಿ) ಮುಹೂರ್ತ! (ಕೂಡಲೆ ನಗುತ್ತ) ಹಹ ಹಹ! ನೀವು ಆಚಾರ್ಯರು ಅನ್ನುವ ಮಾತು ಈಗ ಸತ್ಯವಾಯಿತು ನೋಡಿರಿ... (ತನ್ನಷ್ಟಕ್ಕೆ ನಗುತ್ತ) ಮುಹೂರ್ತ! ಹಹ! ಇಂತಹದಕ್ಕೆಲ್ಲಾ ಈಗಿನ ದಿವಸದೊಳಗೆ ಮುಹೂರ್ತ ಯಾಕೆ—ಅಂತೀನಿ. (ಎಡಬಾಗಿಲಿನಲ್ಲಿ ಸದ್ದಾದುದನ್ನು ಕೇಳಿ ಆ ಕಡೆ ನೋಡುತ್ತ) ಯಾರವರು?

**ಧರೆಪ್ಪ:**— (ಒಳಗಿಬಂದಲೆ) ನಾನ್ರಿ–ಅಣ್ಣಾ ಅವರ. ಧರ್‍ಯಾ—

**ಮುದುಕ:**— ಯಾಕೊ? ತಂದೆಯೇನೊ? ತಾ ಇಲ್ಲಿ.

**ಧರೆಪ್ಪ:**— ತರತೀನ್ರೆಪ.. ಅದಕೇ ಹೊಂಟೀನ್ರಿ.

**ಮುದುಕ:**— (ಕೆರಳಿ) ಹೊರಟೀದಿ? (ಗದ್ದರಿಸುತ್ತ) ನಾನು ಯಾವಾಗ ಹೇಳಿದ್ದು, ನೀನು ಈಗ ಹೊರಟೀಯಾ?

**ಧರೆಪ್ಪ:**— (ಬಂದು ಅಪರಾಧಿಯಂತೆ) ಆಗೇ ಹೊಂಟಿದ್ದಿನ್ರಿ.. ಅವ್ವಾ ಅವ್ರು ನನ್ನ ಕರೆದು ಹೇಳಿದರ್ರಿ–'ಹಾರೋರ ಓಣಿಗೆ ಹೋಗಿ ಹಣಮಂತಾ ಚಾರಿಯವರ್‍ನ ಕರ್‍ಕೊಂಡು ಬಾ' ಅಂತ. 'ಇಲ್ರಿ, ಯವ್ವಾ, ಅಣ್ಣಾ ಅವ್ರ ಕಣ್ಣಿಗೆ ಕನಡಿ ಹಾಕಿಸಬೇಕಾಗೇತಿ– ಅವರಿಗೆ ಹರಕತ ಆಗೇತ್ರಿ' ಅಂತ ಹೇಳಿದಿನ್ರಿ ನಾ. 'ಹೋಗೊ! ಊಟಕ್ಕೇನು ಕಣ್ಣು ಬೇಕಾಗಿಲ್ಲ ಅವರಿಗೆ! ಆಚಾರ್ರು ಬಂದು ಪೂಜೆ ಮಾಡದಿದ್ದರೆ ಕಣ್ಣಿಲೆ ನೋಡೇ ಹೊಟ್ಟೆ ತುಂಬಿಕೊಬೇಕಾದೀತೂ'ಂತ ಬೈದರ್ರಿ.. ಹೊಂಟಿನ್ರೆಣಾ (ಹೊರಡುವನು).

**ಮುದುಕ**:— (ಸಿಟ್ಟಿನ ದನಿಯಲ್ಲಿಯೆ) ಹಣಮಂತಾಚಾರಿ ಆದರೂ ಬಂದನೊ ಇಲ್ಲೊ?

**ಧರೆಪ್ಪ**:— (ತಿರುಗಿನಿಂತು) ತಾಲೂಕಿನ ಕಚೇರಿವಳ್ಗ ಸಾಕ್ಸಿ ಐತಿ ಅಂತರಿ ಅವರ್‍ು, ಮುಂಜಾಳೆದ್ದು ಹೋಗ್ಯಾರಂತರಿ—

**ಮುದುಕ**:— ಹುಂ! (ಎಂದು ಅಸಮಾಧಾನದಿಂದ ಉಸಿರೆಳೆಯಲು ಧರೆಪ್ಪನು ತವಕದಿಂದ ಹೊರಡುವನು). ಹುಚ್ಮುಂಡೆಗಂಡ!

**ಧರೆಪ್ಪ**:— (ಮತ್ತೆ ನಿಂತು ಕ್ಷಮೆ ಬೇಡುವ ದನಿಯಲ್ಲಿ) ಹೊಂಟೆನ್ರೆಪ—

**ಮುದುಕ**:— ಹೋಗೊ ನೀನು! ನೀನಲ್ಲ— (ಧರೆಪ್ಪನು ಹೋಗುವನು) ಹಣಮಂತಾಚಾರಿ ಹುಚ್ಚುಮುಂಡೇಗಂಡ ಅಂದೆ. (ವೆಂಕಪ್ಪನಿಗೆ) ನೋಡಿದಿರಿಲ್ಲೊ? ತಾನರೆ ಬಡವ ಬ್ರಾಹ್ಮಣ. . . ತಾನಾಯಿತು ತನ್ನ ಧರ್ಮ-ಕರ್ಮ ಆಯಿತು; ಅದನೆಲ್ಲಾ ಬಿಟ್ಟು ಸಾಕ್ಷಿ-ಪುರಾವೆ ಯಾಕ ಬೇಕು ಇವನಿಗೆ?

**ವೆಂಕಪ್ಪ**:— (ಉಸುರ್ಗರೆದು) ಈ ಕೋರ್ಟು-ಕಚೇರಿ ಆದಂದಿಂದ ಪೂಜೆ-ಪುರಸ್ಕಾರಕ್ಕೆ ಬ್ರಾಹ್ಮಣರು ಸಿಗೋದೆ ಕಷ್ಟ ಆಗಿದೆ. ಆಯಿತು-ಅವರದಾದರೂ ತಪ್ಪೇನು? ದೇವರ ಪೂಜೆಗಿಂತ ಸಾಕ್ಷಿ-ಪುರಾವೆ ಕೊಟ್ಟರೇನೇ ಹೆಚ್ಚು-ದಕ್ಷಿಣಾ ಸಿಗೋದು— (ಎದುರು ಬಲಬಾಗಿಲಿನಲ್ಲಿ ಏನನ್ನೋ ನೋಡಿ ತಡೆಯುವನು).

[ 'ಅವ್ವ' ನು ಬಲಬಾಗಿಲಿನಿಂದ ಬಂದು ]

**ಅವ್ವ**:— ಹಣಮಂತಾಚಾರ್‍ು ಬರೋದಿಲ್ಲಂತ. . ಪೂಜೆ ನೀವ್ರ ಮಾಡತೀರೊ—

**ಮುದುಕ**.— (ಸಿಟ್ಟಿನಿಂದ ಅವಳನ್ನು ನೋಡುತ್ತ) 'ನೀವು ಮಾಡತೀರೊ' ಅಂದರೆ? ಪೂಜೆ ಇಲ್ಲದೆ ಉಪವಾಸ ಇರು ಅಂತೀಯೋ ಏನು ನನಗೆ?

**ಅವ್ವ**:— (ಅಣಕಿನ ದನಿಯಲ್ಲಿ) ಅಯ್ಯೊ! ಉಪವಾಸ ಯಾಕೆ ಇರತೀರಿ ನಾನು ಅಡಿಗೆ ಬಡೆದು ಹಾಕಲಿಕ್ಕೆ ಇರೋತನಕ? ಪೂಜೆ ಮಾಡತಿದ್ದರೆ ಹೇಳಿರಿ—ಅಂದೆ; ಇಲ್ಲಾ ಅಂದರೆ ಒದ್ದೆಯೊಳಗಿಂದ ಪಂಚೆ ಇಟ್ಟಿಲ್ಲೇನು ಅಂತ ಮತ್ತೆ ನನ್ನ ಮ್ಯಾಲೇ ಹರಿಹಾಯ್ತೀರಿ—ಅದಕ್ಕ ಕೇಳಿದೆ. . ಅಡಗಿಯ

ಕಾಳಜೀನೂ ನಾನೇ ಮಾಡಬೇಕು— ಪೂಜೆಯ ಕಾಳಜೀನೂ ನಾನೇ ಮಾಡಬೇಕು! (ಎಂದು ಗುಣಗುಟ್ಟುತ್ತ ಬಲಬದಿಯ ಬಾಗಿಲಿನಿಂದ ಒಳಗೆ ಹೋಗುವಾಗ ಎದುರು ಪುಟ್ಟು ನನ್ನು ನೋಡಿ 'ಸರಿ – ಹಾದಿಯೊಳಗಿಂದ. ಎಲ್ಲಾದರ ಕಾಳಜಿ ನಾನೇ ಮಾಡಬೇಕು' ಎನ್ನುತ್ತ ಹೋಗುವಳು).

**ಪುಟ್ಟು**:— ಈ ಹೊತ್ತು ಪೂಜೆಯ ಕಾಳಜಿ ಯಾರೂ ಮಾಡಬೇಡಿರಿ. (ತಂದೆಯು ತನ್ನನ್ನು ಸಿಟ್ಟಿನಿಂದ ನೋಡಲು) ಅಂದರೆ—ಅನಾಯಾಸ ಮನೆಗೆ ದೊಡ್ಡ ಮನೆತನದ ಆಚಾರ್ಯರು ಬಂದಾರೆ— (ಎಂದು ವೆಂಕಪ್ಪನನ್ನು ದಿಟ್ಟಿಸಲು ಅವನು ತುಟಿಕಚ್ಚಿ ಬೆರಳಿನಿಂದ ಹೆದರಿಸುವನು.)

**ಮುದುಕ**:— (ಒಮ್ಮೆಲೆ ವೆಂಕಪ್ಪನ ಕಡೆ ಮುಖ ತಿರುಗಿಸಲು ವೆಂಕಪ್ಪನು–ಮೀಸೆಯ ಮೇಲೆ ಕಯ್ಯಾಡಿಸುವನು) ಅಹುದು—ಮರತೇ ಬಿಟ್ಟಿನಲ್ಲ! ಅಂದಹಾಗೆ ನೀವು ಈಹೊತ್ತು ಇಲ್ಲಿಯೆ ಅನುಕೂಲ ಮಾಡಿಸಿದರೆ—

**ಪುಟ್ಟು**:— (ಇದುವರೆಗೆ ವೆಂಕಪ್ಪನು ತನ್ನನ್ನು ನೋಡುತ್ತಿರಲು ಅವನನ್ನು ಕೆಣಕುವಂತೆ ತನ್ನ ತಲೆಗೆ ಕೈಯಿಟ್ಟು 'ಚಂಡಿಕೆ--ಎಲ್ಲಿ?' ಎಂಬ ಪ್ರಶ್ನೆಯನ್ನು ಕೇಳುವಂತೆ ನಟಿಸುತ್ತ) ಇದು ಇಲ್ಲಂತೀರಿ— (ತಂದೆಯು ತನ್ನನ್ನು ನೋಡಲು ತಲೆ ತುರಿಸುತ್ತ ನಿಲ್ಲುವನು).

**ಮುದುಕ**:— (ಮಗನಿಗೆ) ಏನು ಹಾಗೆ ತಲೆ ತುರಿಸಿದರೆ 'ಇದು–ಇದು' ಅಂತ?

**ಪುಟ್ಟು**:— ಅಲ್ಲ—ಇದು ಅಂದರೆ ಹಣಮಂತಾಚಾರ್‍ರಿಲ್ಲ– ಅದಕ್ಕೆ–

**ಮುದುಕ**:— (ಎದ್ದು) ಸಾಕು ನಿನ್ನ 'ಇದಕ್ಕೆ–ಅದಕ್ಕೆ'! ಅವರ ಅಂಗಿ–ರುಮಾಲು ಆದರೂ ತೆಗೆದಿಡು—ಸುಮ್ಮನೆ ನಿಂತು ಹಾಳು ಹರಟೆ ಹೊಡೆಯೋದಕಿಂತ (ಎಂದು ಬಲಬದಿಯ ಬಾಗಿಲಿನಿಂದ ಒಳಕ್ಕೆ ಹೋಗುವನು).

[ಕೆಲಹೊತ್ತು ನಿಃಶಬ್ದತೆ. ಆ ಮೇಲೆ ಪುಟ್ಟು ದರ್ಪದಿಂದ ನಗುತ್ತ ತನ್ನ ಕಡೆ ಬರಲು–]

**ವೆಂಕಪ್ಪ**:— (ಒಳದನಿಯಲ್ಲಿ, ಸಿಟ್ಟಿನಿಂದ, ಹಲ್ಲು ಕಟಿಯುತ್ತ) ಇದನ್ನು ನಾನು ನೆನಪಿನಲ್ಲಿಡತೀನಿ ಅಂದೆ! ನಾಳೆ ಬೆಳಗು ಆಗೋದರೊಳಗೆ ನಿನಗೆ ವಿಧವಾ–ವಿವಾಹ ಮಾಡಿಸಲಿಲ್ಲಾ ಅಂದರೆ—

**ಪುಟ್ಟು**:— (ಇಷ್ಟರಲ್ಲಿ ವೆಂಕಪ್ಪ ಮತ್ತು ಎಡದ ಬಾಗಿಲುಗಳ ನಡುವೆ ನಿಂತಿದ್ದು) ಅಂದರೆ–? ಅಂದರೆ–? (ಹಂಗಿಸುವನು) ಏನು ಮಾಡುವೆ? ನಾಳೆ ಬೆಳಗಾಗೋದರೊಳಗಂತೆ! ನೀನು ಈಗಿಂದೀಗ ನಿಂತಲ್ಲಿಯೆ ಚಂಡಿಕೆ

ಬೆಳೆಸಲಿಲ್ಲಾ ಅಂದರೆ ನಿನ್ನ ಪಾಲಿಗೆ ನಾಳೆ ಬೆಳಗೇ ಆಗೋದಿಲ್ಲ...
(ಒಮ್ಮೆಲೆ) ತೆಗೆ ರುಮಾಲು (ಎಂದು ಕಸಿದುಕೊಳ್ಳಲು ಹೋಗುವನು. ವೆಂಕಪ್ಪನು ಗಟ್ಟಿಯಾಗಿ ಹಿಡಿದುಕೊಳ್ಳುವನು. ಹೀಗೆ ಇಬ್ಬರ ಜಗ್ಗಾಟ ನಡೆದಾಗ—)

**ಮುದುಕ**:—(ಮಾತನಾಡುತ್ತಲೆ ಬಂದು) ನಿಮಗೆ ಒದ್ದೆಯುದು ನಡೆಯೋದೊ ಏನು ಒಣಗಿಸಬೇಕೊ? (ಎಂದು ಎದುರು ನೋಡಿ—ಗದ್ದರಿಸುತ್ತ) ಪುಟ್ಟೋ—ಏನೋ ಇದು?

[ವೆಂಕಪ್ಪ-ಪುಟ್ಟು ಚಕಿತರಾಗಿ ತಡೆಯುವರು]

**ವೆಂಕಪ್ಪ**:—(ಸುಳ್ಳು ನಗೆಯಿಂದ) ಹಹ! ರುಮಾಲಿನ ಅಂಚಿನೊಳಗೆ ತುಳಸೀದಳ ಒಂದು ನಾಲ್ಕು ಕಟ್ಟಿಟ್ಟಿದೆ-ಹ್ಯಾಗೆ ಗಂಟು ಬಿದ್ದಿದೆಯೆ ಏನೊ!—ಅವನ್ನ ಬಿಚ್ಚಲಿಕ್ಕೆ ಹೇಳಿಕೊಂಡೆ ನಿಮ್ಮ ಚಿರಂಜೀವರಿಗೆ.

**ಮುದುಕ**:—ನಮ್ಮಲ್ಲೇನು—ಬೇಕಾದಷ್ಟು ತುಳಸಿ ಇದೆ... ಒಂದು ಜಡಿರಿ ಬೇಗ. (ಹೋಗುವನು)

[ವೆಂಕಪ್ಪ-ಪುಟ್ಟು ಕಾದಾಡುವ ಟಗರುಗಳಂತೆ ಒಬ್ಬರನ್ನೊಬ್ಬರು ನೋಡುವರು]

**ಪುಟ್ಟು**:—ತುಳಸಿ ಇದೆಯೊ, ಬರಿಯ ವೃಂದಾವನ ಇದೆಯೊ—ನೋಡೋಣ. ತೆಗೆಯೊ! (ಎಂದು ಕಸಿದುಕೊಳ್ಳಲು ಹೋಗುವನು. ಮತ್ತೆ ಮೊದಲಿನಂತೆ ಜಗ್ಗಾಟ ನಡೆದಾಗ—)

**ಮುದುಕ**:—(ಮತ್ತೆ ಮಾತನಾಡುತ್ತಲೆ ಬಂದು) ಮರೆತೇ ಬಿಟ್ಟೆ... ಒಣಗಿಸಬೇಕೊ ಒದ್ದೆ ನಡೆಯೋದೋ ಅಂತ ಕೇಳಲಿಕ್ಕೆ—(ಒಮ್ಮೆಲೆ ಮುಂದೆ ನೋಡಿ) ಎಲ!—(ಕೂಡಲೆ ವೆಂಕಪ್ಪನು ಮೂರ್ಛೆ ಹೋದವರಂತೆ ಪುಟ್ಟೂನ ಕೈಗಳಲ್ಲಿ ಬಿದ್ದುಕೊಳ್ಳಲು ಗಾಬರಿಯಿಂದ ಮುಂದೆ ಬಂದು) ಏನು?—ಆಯಿತೇನು? (ಮಗನನ್ನು ನೋಡಿ) ಗಾಳಿಯಾದರೂ ಹಾಕೊ! (ಎಂದು ಗದ್ದರಿಸುವನು. ಪುಟ್ಟು ತನ್ನ ಶರ್ಟಿನ ಕಿಸೆಯಲ್ಲಿ, ಆಮೇಲೆ ವೆಂಕಪ್ಪನ ಕೋಟಿನ ಕಿಸೆಯಲ್ಲಿ ಕರವಸ್ತ್ರವನ್ನು ಹುಡುಕುವ ಉದ್ದೇಶದಿಂದ ಕೈಹಾಕುವನು. ಎಲ್ಲಿಯೂ ದೊರಕದಂತಾಗಲು ಹುಚ್ಚನಂತೆ ಅತ್ತಿತ್ತ ನೋಡುವನು. ಅದಕಾಗಿ ಕೆರಳಿ—) ಏನು ನೋಡತಿ? ಹುಡುಕತೀ ಏನು? ಅವರ ರುಮಾಲು ತಕ್ಕೊಂಡು—

**ವೆಂಕಪ್ಪ**:—(ತಟ್ಟನೆ ಉದ್ದವಾಗಿ ಉಸಿರೆಳೆದು, ಕಣ್ದೆರೆದು, ದೂರ ಸಿಡಿದು ನಿಂತು, ಕನಸಿನಲ್ಲಿಯಂತೆ) ಏನು? ಎಲ್ಲಿದ್ದೀನಿ ನಾನು?

**ಪುಟ್ಟು**:— ಇಷ್ಟರೊಳಗೆಯೇ—ಇದೇ ಈಗ ನನ್ನ ಕೈಯೊಳಗಿದ್ದಿರಿ—

**ಮುದುಕ**:— (ವೆಂಕಪ್ಪನಿಗೆ) ನೈವೇದ್ಯದಲ್ಲಿ ಗುಣ ಇಲ್ಲೇನು ?

**ವೆಂಕಪ್ಪ**:— (ಕಣ್ಣೊರೆಸಿಕೊಂಡು) ಏನಿಲ್ಲ. . ಸರಿಯಾಗಿದೆ. . ಏನೊ—ನಿನ್ನಿನಿಂದ ಯಾಕೊ ಪಿತ್ತ ಹೆಚ್ಚಾಗಿ—ಬಹಳೊತ್ತು ಕೂತು ಒಮ್ಮೆಲೆ ಎದ್ದುಕೂಡಲೆ ಕಣ್ಣಿಗೆ ಕತ್ತಲೆ ಬಂದಹಾಗೆ ಆಯಿತೇನೊ ? ಇಷ್ಟಾದೀತೂ ಅಂತ—

**ಪುಟ್ಟು**:— (ನಡುವೆಯೇ) ಇಷ್ಟು ಅಂದರೇನು ? ನಿಮ್ಮ ಮುಖ ಬಿಳ್ಳಿ ಬೆಮರೊಡೆದು ಕಾಲು ಗಡಗಡ ನಡುಗತಿದ್ದುವು. ನಾನು ಹಿಡಿದಿದ್ದಿಲ್ಲ ಅಂದರೆ ನಿಮ್ಮ ತಲೆ ನೆಲಕ್ಕೆ ಅಪ್ಪಳಿಸುತ್ತಿತ್ತು !

**ವೆಂಕಪ್ಪ**:— (ಆಶ್ಚರ್ಯ ತೋರಿಸಿ) ಅಹುದಲ್ಲ? ಇನ್ನೂ ತಲೆಗೆ ರುಮಾಲು ಇದ್ದಿತೂ, ಅದೊಂದು ಸುದೈವ ಎನಬೇಕು.

**ಮುದುಕ**:— (ಉಸುರ್ಗರೆದು) ಹುಂ. . ಪಾಪ! . . ನಿನಗೆ ಯಾಕ ತ್ರಾಸ ಕೊಡಬೇಕು ಹಾಗಾದರೆ? ನಾನೇ ಪೂಜೆ ಮಾಡತೀನಿ.

**ವೆಂಕಪ್ಪ**:— ಛೆ—ಛೆ—ಛೆ! ಇದೇನು, ರಾಯರೆ? ಏನೊ ಬಂದಿಷ್ಟು ಪಿತ್ತವಿಕಾರ ಆಯಿತು ಅನ್ನುವ ನೆವದಿಂದ ಪೂಜೆ ತಪ್ಪಿಸಿಕೊಳ್ಳೋದೆ? ಅದೂ ತಮ್ಮಂಥವರಲ್ಲಿ! ತಾವೇನೂ ಕಾಳಜಿ ಮಾಡಬೇಡಿರಿ. . ತಲೆ ತುಂಬಿ ಬಂದು ಒದ್ದೆಯ ಬಟ್ಟೆ ಕಟ್ಟಿಕೊಳ್ಳತೀನಿ—ಪೂಜೆಯ ಮಾಡತೀನಿ. (ಪುಟ್ಟುವಿಗೆ) ಯಾಕೆ? ಏನಂತೀರಿ?

**ಮುದುಕ**:— (ತಿರಸ್ಕಾರದಿಂದ) ಅವನಿಗೇನು ಕೇಳತೀರಿ? ಬಂದು ಪೂಜೆಯು, ಪುರಸ್ಕಾರವೆ? ದೇವರೆಂದರೇನೊ? ಭಕ್ತಿ ಎಂದರೇನೊ ?

**ವೆಂಕಪ್ಪ**:— (ನಗುತ್ತ) ಛೆ!—ಹಾಗೆಂದರೆ ಹೇಗೆ? ಇಂದಿಲ್ಲ ನಾಳೆ ಈ ಮನೆಯು ದೇವರು ಅವರಿಗೆ ಬಿಟ್ಟದ್ದಲ್ಲ. .

**ಮುದುಕ**:— ಹೀಗೆಯೆ ನಡೆದರೆ ಇಂದಿಲ್ಲ ನಾಳೆ ಅವನೇ ಈ ಮನೆ ಬಿಡಬೇಕಾಗುವುದು.! ಅದಿರಲಿ, ಆಚಾರ್ರೆ. . ನಿನಗೆ ಹೇಗೆ ಅನುಕೂಲ ಹಾಗೆ ಮಾಡಿರಿ. . (ಮಗನಿಗೆ ದರ್ಪದಿಂದ) ಏ, ಪುಟ್ಟೂ, ಈಗಾದರೂ ಏನಾದರೂ ಅನಿಸುವುದೊ ಇಲ್ಲೊ ನಿನಗೆ?. . ಅವರು ಮೊದಲು ಬಂದಿಷ್ಟು ವಿಶ್ರಾಂತಿ ತಕ್ಕೊಳ್ಳಲಿ. . ಆ ಮೇಲೆ ಅವರ ಅಂಗಿ—ರುಮಾಲು

ತೆಗೆದಿಡು. . ಮತ್ತೆ ಒಳಗೆ ಆಕೆಗೆ ಹೇಳು–‘ ಅವರಿಗೆ ಮುಡಿಯೊಳಗೆ ತಲೆಗೆ ಕಟ್ಟಿಕೊಳ್ಳಲಿಕ್ಕೆ ಒಂದು ಒದ್ದೆಯ ಬಟ್ಟೆ ಇಡು ’ ಅಂತ. . (‘ ಅವಿವೇಕಿ–ಏನು ಹೇಳ್ತದೊ ಏನು ಬಿಡ್ತದೊ’ ಎಂದು ಗುಣುಗುಟ್ಟುತ್ತ ಒಳಗೆ ಹೋಗುವನು. ಪುಟ್ಟುವು ತಂದೆಯು ಹಿಂದಿನಿಂದ ಬಾಗಿಲಿನ ವರೆಗೆ ನಡೆದು, ತಿರುಗಿ ನಿಂತು, ವೆಂಕಪ್ಪನ ಕಡೆ ಸಾಭಿಪ್ರಾಯವಾಗಿ ನೋಡುತ್ತ ಬರುವಾಗ— )

**ವೆಂಕಪ್ಪ:**— ( ಸೋಗು ತಾಳಿ ) ರಾಯರೆ, ಬಟ್ಟೆ ಎಷ್ಟು ದೊಡ್ಡದಿದ್ದೀತು ಅಷ್ಟು ಅನುಕೂಲ ಅಂತ ಹೇಳಿರಿ—ಅಂದರೆ ಬಹಳೊತ್ತು ನೀರು ಹಿಡಿಯುವುದು ಅಂತ. . . ( ನಕ್ಕು ) ಯಾಕೆ ಏನಂತೀರಿ?

**ಪುಟ್ಟು:**— ( ಹಲ್ಲು ಕಟಿಯುತ್ತ ) ಚಂಡಿಕೆ ಇಲ್ಲದಿದ್ದರೂ ತಲೆ ಇದೆ ನಿನಗೆ.

[ ವೆಂಕಪ್ಪನು ಆಭಾರ ಮನ್ನಿಸುವವನಂತೆ ರುಮಾಲನ್ನು ತೆಗೆದು ಬಲಗೈಯನ್ನು ಹೊಟ್ಟೆಗಿಟ್ಟು ಸೋಗಿನ ನಮ್ರತೆಯಿಂದ ತಲೆ ಬಾಗಿಸುವನು. ]

( ತೆರೆ )

## 'ಮಧ್ಯಾಹ್ನ' ಎಂಬ ಎರಡನೆಯ ಅಂಕ

[ಮೊದಲನೆಯ ಅಂಕದ ತರುವಾಯ ಅರ್ಧಗಂಟೆಯ ಸಮಯ. ತೆರೆಯು ಮೇಲಕ್ಕೆದ್ದಾಗ ಕಾಣುವದು ಪುಟ್ಟ್ಯಾನ ಕೋಣೆ. ಎದುರು ನಡುಮನೆಗೆ ಹೋಗುವ ಬಾಗಿಲು; (ಪ್ರೇಕ್ಷಕರ) ಎಡಕ್ಕೆ ಬದಿಯ ಬೀದಿಗೆ ಹೋಗುವ ಬಾಗಿಲು. ಎದುರಿನ ಬಾಗಿಲಿನಿಂದ ಬಂದರೆ ಬಲಬದಿಗೆ ಒಂದು ಮೇಜು ಇದೆ. ಅದರ ಮೇಲೆ ಕಾಗದಗಳೂ ಕೆಲವು ಪುಸ್ತಕಗಳೂ ಚಲ್ಲಾಪಿಲ್ಲಿಯಾಗಿ ಬಿದ್ದಿವೆ. ಮೇಜಿನ ಎರಡೂ ದಂಡೆಗೆ (ಅಂದರೆ ಎದುರಿನ ಬಾಗಿಲಿನ ಕಡೆ ಒಂದು, ಎಡದ ಬಾಗಿಲಿನ ಕಡೆ ಒಂದು ಹೀಗೆ) ಎರಡು ಕುರ್ಚಿಗಳಿವೆ. ಎಡಬದಿಗೆ ನೋಡಿದರೆ ಮೂಲೆಯ ಹತ್ತಿರ ಒಂದು ಶೆಲ್ಫ (shelf) ಮತ್ತು (ಪ್ರೇಕ್ಷಕರ) ಬಲಬದಿಯ ಗೋಡೆಗೆ ಇಟ್ಟ ಒಂದು ಮಲಗುವ ಮಂಚ. ಸದ್ಯಕ್ಕೆ ಈ ಕೋಣೆಯಲ್ಲಿ ಯಾರೂ ಇಲ್ಲ. ಆದರೆ ಮೇಜಿನ ಮೇಲಿಟ್ಟ ಗ್ರಾಮೋಫೋನು ಹಾಡುತ್ತಲಿದೆ. ಹಾಡು ಮುಗಿಯುವಷ್ಟರಲ್ಲಿ ಪುಟ್ಟು ಮತ್ತು ವೆಂಕಪ್ಪ ಒಮ್ಮೆಲೆ ಎಡದ ಬಾಗಿಲಿನಿಂದ ಬರುವರು. ಇಬ್ಬರ ಬಾಯಲ್ಲೂ ಸಿಗರೇಟು. ಒಳಗೆ ಬಂದಾಕ್ಷಣ ಇಬ್ಬರೂ ಸಿಗರೇಟನ್ನು ಕೈಯಲ್ಲಿ ಹಿಡಿದುಕೊಳ್ಳುವರು. ಪುಟ್ಟು ಎದುರಿನ ಬಾಗಿಲಿನಿಂದ ಒಳಗೆ ಯಾರೂ ಇಲ್ಲೆಂದು ಮನವರಿಕೆ ಮಾಡಿಕೊಂಡು ಮತ್ತೆ ಸಿಗರೇಟನ್ನು ಬಾಯಲ್ಲಿಟ್ಟುಕೊಂಡು ಈಗಿದ್ದ ರೆಕಾರ್ಡನ್ನು ತೆಗೆದು ಮತ್ತೊಂದು ರೆಕಾರ್ಡನ್ನು ಹಚ್ಚುವನು. ವೆಂಕಪ್ಪನ ತಲೆಯಮೇಲಿನ ರುಮಾಲು ಇನ್ನೂ ಹಾಗೆಯೆ ಇದೆ; ಕೋಟು ಮಾತ್ರ ಎಡಬಾಗಿಲಿನ ಹತ್ತಿರದ ಕುರ್ಚಿಗೆ ತೂಗಬಿದ್ದಿದೆ. ಪುಟ್ಟ್ಯಾನು ಎರಡನೆಯ ರೆಕಾರ್ಡನ್ನು ಪ್ರಾರಂಭ ಮಾಡಿದ ಕೂಡಲೆ ಇಬ್ಬರೂ ಒಬ್ಬರನ್ನೊಬ್ಬರು ನೋಡಿ ಮತ್ತೆ ಎಡಬಾಗಿಲಿನಿಂದ ಹೊರಗೆ ಹೋಗುವರು. ಈ ಎರಡನೆಯ ಹಾಡು ಮುಗಿಯುವುದೊಂದೆತಡ ಪುಟ್ಟ್ಯಾನು ಮೊದಲಿನಂತೆ ಒಳಗೆ ಬರಲು ಕಾಲಿಟ್ಟಿದ್ದಾನೆ; ಅಷ್ಟರಲ್ಲಿ ಬುಸುಗುಡುವ ನಾಗರದ ಹೆಡೆಯಂತೆ ತಲೆಯನ್ನು ಅತ್ತಿತ್ತ ಹೊಯ್ದಾಡಿಸಿ ನೋಡುತ್ತ ಮುದುಕನು ಬರುವನು. ಅವನನ್ನು ನೋಡಿದಾಕ್ಷಣ ಪುಟ್ಟು ಹೊರಗೆ ಜಾರುವನು... ಯಾರನ್ನೂ ಕಾಣದಕ್ಕೆ ಮತ್ತಿಷ್ಟು ಕೆರಳಿ— ]

**ಮುದುಕ**:— (ಒದರುತ್ತ) ಏ, ಪುಟ್ಟ್ಯಾ, ಪುಟ್ಟ್ಯಾs, ಏ— ಎಲ್ಲಿದ್ದೀಯೊ ?

**ಪುಟ್ಟು**:— (ಏನೂ ಅರಿಯದವನಂತೆ ಬಂದು) ಬಂದೆ–ಬಂದೆ, ಅಪ್ಪಾ; ಯಾಕೆ ? ಏನಾದರೂ ಬೇಕಾಗಿದೆ ಏನು ?

**ಮುದುಕ.**— (ಸಿಟ್ಟು ತಡೆಯುತ್ತ) ಬೇಕಾಗಿದೆ? ಹುಂ—ಯಾರಿಗೆ ಬೇಕಾಗಿದೆ? ನನಗಲ್ಲ—ನಿನಗೆ, **ನಿನಗೇ** ಬೇಕಾಗಿದೆ ಒಮ್ಮೆ ಕಣ್ಣು ತೆರೆಯೋಹಾಗೆ! (ಗ್ರಾಮೋಫೋನಿನಕಡೆ ಬೆರಳುಮಾಡಿ ತೋರಿಸುತ್ತ, ಅಧಿಕಾರ ಯುಕ್ತವಾಣಿಯಿಂದ) ತೆಗೆ ಅದನ್ನ.... ನೋಡತೀ ಏನು? ಆ ಸುಟ್ಟ ಗ್ರಾಮೋಫೋನ **ತೆ-ಗೀ** ಅಂದೆ! (ಪುಟ್ಟು ಅದನ್ನು ಮುಚ್ಚುವನು). ಬರಿಯ ಮುಚ್ಚಬೇಡ ಅದನ್ನ....ತೆಗೀ-ಎತ್ತು-(ಗದ್ದರಿಸುತ್ತ) ಎತ್ತಿ ಅದನ್ನ ಗಟಾರದೊಳಗೆ ಬಿಸಾಡು ನೋಡೋಣ! ..ಎತ್ತುವೆಯೊ— ಏನು ನಾನೇ ಅದನ್ನ ಮುಟ್ಟಿ ಹೊರಗೆ ಒಗೆಯಲಿಯೊ?

**ವೆಂಕಪ್ಪ:**— (ಸಪ್ಪಗೆ ಮುಖ ಮಾಡಿಕೊಂಡು ಮೆಲ್ಲನೆ ನಡೆದುಬರುತ್ತ) ಏನು–ರಾಯರೆ–ಏನಾಯಿತು?

**ಮುದುಕ:**— (ಸಿಟ್ಟು ಇಳಿಯುತ್ತ) ಆಗೋದೇನು? ಈ ಕುಲವಿನಾಶಕ ಮನೆಯೊಳಗೆ ಇರೋತನಕ ಪುಣ್ಯ ಗಳಿಸೋಹಾಗಿಲ್ಲ, ಪಾಪ ಅಳಿಸೋ ಹಾಗಿಲ್ಲ. ತಾಸು ಹಾಳಾಗಲಿ–ಮುಂಬಯನ್ನೂ ಯಾಕೆ ನರಕಕ್ಕೆ ಎಳೆಯ ಬೇಕು ಅಂತೀನಿ.. ಯಾವಾಗಿನಿಂದ ನಾನು ಆಹ್ನಿಕ ಮಾಡಬೇಕು, ಮಾಡಬೇಕು ಅಂತ ಪ್ರಯತ್ನ ನಡೆಸೀನಿ, ಇವರ ಕಿರಿಕಿರಾಟ ನಡೆದೇ ಇದೆ! ಏನು ಭಗವಂತನ ಭಜನೆ ಇದೆ ಅಂತ ನನ್ನ ಆಹ್ನಿಕ ಬಿಟ್ಟು ಇದನ್ನ ಕೇಳತಾ ಕೂಡಲಿಯಾ? ಯಾವ ಹೊಲೆಯ–ಹೊಲತಿಯರು ಹಾಡಿದ್ದೊ! ಕೇಳಿಸಿದರೆ ಮೈಲಿಗೆ ಆಗಬೇಕು! (ಮಗನಿಗೆ) ಇನ್ನೊಮ್ಮೆ ನನ್ನ ಆಹ್ನಿಕಕ್ಕೆ ಅಡ್ಡ ಬಂದಿತೂ ಅಂದರೆ— ಮೈಲಿಗೆ ಆದರೂ ಚಿಂತೆ ಇಲ್ಲ—ಅದನ್ನ ತುಳಿದು–ತುಳಿದು ಬಿಡತೀನಿ. (ವೆಂಕಪ್ಪನಿಗೆ) ನನಗೆ ಇನ್ನೂ ಒಂದು— ಒಂದೂವರೆ ತಾಸು ಬೇಕು ಆಹ್ನಿಕ ಮುಗಿಯಲಿಕ್ಕೆ; ಅಲ್ಲಿಯವರೆಗೆ ನೀವು ವಿಶ್ರಾಂತಿ ತಕ್ಕೊಂಡು ನನ್ನದು ಮುಗಿಯೋದಕೆ ಒಂದು ಅರ್ಧ ತಾಸು ಮುಂಚೆ ಸ್ನಾನ ಮಾಡಿದರೆ ಸಾಕು. ಈಗ ಹೇಗಿದೆ?

**ವೆಂಕಪ್ಪ:**— (ತನ್ನ ಕೋಟು ತೂಗಬಿದ್ದ ಕುರ್ಚಿಯಲ್ಲಿ ಕುಳಿತುಕೊಳ್ಳುತ್ತ) ತಲೇನೇ ಒಂದಿಷ್ಟು ದಿಮ್ ಅಂತಿದೆ ಇನ್ನೂ.. (ನಗೆಯಿಂದ) ಇಲ್ಲಿ ಒಳಗೆ ನಿಮ್ಮ ಚಿರಂಜೀವರು ಹಾಡು ಹಚ್ಚಿದ್ದರು, ಅವರ ಮನರಂಜನೆಗೆ ಯಾಕೆ ಅಡ್ಡಿ ಆಗಬೇಕು ಅಂತ, ನಾನೇ ಹೊರಗೆ ಹೋಗಿ ನಿಂತುಕೊಂಡೆ, ಒಂದಿಷ್ಟು ತಲೆ ಶಾಂತ ಆಗಲಿ ಅಂತ.

**ಮುದುಕ**:— (ಪುಟ್ಟುಗೆ, ಕಿವಿ ಹಿಂಡಿ ಹೇಳುವಂತೆ) ನೋಡಿದಿಯಾ? ಎಲ್ಲರಿಗೂ ತ್ರಾಸ! . . ಅಪಲಕ್ಷಣನ್ನ ತಂದು! . . (ಪುಟ್ಟು ಸುಮ್ಮನಿದ್ದುದು ಈಗ ಲಕ್ಷ್ಯಕ್ಕೆ ಬಂದು ಒಮ್ಮೆಲೆ ಕೆರಳಿ) ಬೊಗಳೊ! ತುಟಿ ಮುಚ್ಚಿದರೂ ಹುಂ ಅನ್ನಲಿಕ್ಕೆ ಬರುವುದು — ‘ಹುಂ’ ಅಂತಾದರೂ ಬೊಗಳು!

(ಎದುರಿನ ಬಾಗಿಲಿನಿಂದ ಬಂದು)

**ಅವ್ವ**:— ಏನಾಯಿತು? (ಒಬ್ಬೊಬ್ಬರನ್ನು ನೋಡುವಳು).

**ಮುದುಕ**:— (ಅಣಕಿಸಿ) ಏನಾಯಿತು! ಬಂದಳು D. S. P. ಬಂದ ಹಾಗೆ! ತನ್ನ ಕೆಲಸ ಬಿಡಬಾರದು, ಮಂದಿಯ ಕೆಲಸದೊಳಗೆ ಕೈಹಾಕ ಬಾರದು ಅನ್ನೋದು ಒಬ್ಬರಿಗೂ ಗೊತ್ತೇ ಇಲ್ಲ ಈ ಮನೆಯೊಳಗೆ!

**ಅವ್ವ**:— (ಇನ್ನೂ ಶಾಂತಳಿದ್ದಾಳೆ) ಅಲ್ಲ—ಪುಟ್ಟಗ ಸಿಟ್ಟು ಮಾಡ ತಿದ್ದರಿ— ಮತ್ತೇನಾಯಿತು ಅಂದೆ.

**ಮುದುಕ**:— (ಕಾಲು ಕೆದರಿ ಜಗಳ ಹೂಡುವ ದನಿಯಲ್ಲಿ) ಯಾಕೆ? ನಿನಗೆ ತಿಳಿಸದೆಯೆ ಪುಟ್ಟ್ಯಾನ ಮೇಲೆ ಸಿಟ್ಟು ಮಾಡೊಹಾಗೆಯೆ ಇಲ್ಲೇನು?

**ಅವ್ವ**:— (ಓರೆಗಣ್ಣಿನಿಂದ ವೆಂಕಪ್ಪನನ್ನು ನೋಡುತ್ತ) ಮಂದಿ ಬಂದ ನಿಮಿತ್ತದಿಂದಾದರೂ ಮನೆಯೊಳಗೆ ಒಂದು ದಿವಸ ಒದರಾಟ ಬ್ಯಾಡ ಅಂತ ಹೇಳಿದೆ.

**ಮುದುಕ**.— (ಆಶ್ಚರ್ಯ ತೋರಿಸಿ) ಒದರಾಟ ಬೇಡ! ಅಂದರೇನು ಮನೆಯೊಳಗೆ ಒದರಾಡೋದರ ಸಲುವಾಗಿಯೆ ನಾನು ಪೆನಶನ್‌ತಕ್ಕೊಂಡೆ ಅಂತ ತಿಳಿದೆಯೊ ಏನು? (ಮಗನನ್ನು ನೋಡುತ್ತ) ನೋಡಿದಿಯಾ, ಈಗ ಹೇಗೆ ಕಲ್ಲುದೇವರು ನಿಂತಹಾಗೆ ನಿಂತಾನೆ! ಇವನ ವಯಸ್ಸಿನೊಳಗೆ ನಾನು ಇಷ್ಟೊತ್ತಿಗೆ ಕೆಲಸ ಹಿಡಿದು ಹಾದಿಗೆ ಹತ್ತಿದ್ದೆ.

**ಅವ್ವ**:— (ಅಭಿಮಾನದಿಂದ) ಅವನಿಗೂ ಒಂದು ಕೆಲಸ ಹಚ್ಚಿ ಕೊಡಿರಿ, ಅವನೂ ಹಾದಿಗೆ ಹತ್ತ್ಯಾನೆ!

**ಮುದುಕ**:— ನಾನು ಹೊರಗೆ ಕೆಲಸ ಹಚ್ಚಿಕೊಟ್ಟರೆ ಅವ ಒಳಗೆ ಬಂದು ಮತ್ತೆ ಗ್ರಾಮೋಫೋನೇ ಹಚ್ಚುವವ! ತಾಯಿಯ ಹಾಗೆ ಮಗ! . . ಹಂ. . ತನ್ನ ಕೆಲಸ ತಾನು ಮಾಡೋ ಹಾಗಿಲ್ಲ. . ಆಚಾರ್ಯರ ಸಲುವಾಗಿ ಒಂದು ಒದ್ದೆಯ ಬಟ್ಟೆ ಹಾಕಿದೆಯೊ ಇಲ್ಲೊ?

**ಅವ್ವ**:— ( ತಿರಸ್ಕಾರದ ನಗೆಯಿಂದ ) ಅಯ್ಯೋ ! ಆಚಾರ್ರ್ರು ಬರೋದಿಲ್ಲ ಅಂತ ಹೇಳಿಕಳಿಸ್ಯಾರ ಅಂತ ಎಷ್ಟು ಸಲ—

**ಮುದುಕ**:— ( ನಡುವೆಯೆ ) ಒಲೀವಳಗಿನ ಬೂದಿ ಎಲ್ಲಾ ನಿನ್ನ ತಲೆಯೊಳಗೇ ತುಂಬಿದೆಯೊ ಏನೂ ಅಂತೀನಿ ! ( ಮಗನನ್ನು ಗದ್ದರಿಸುತ್ತ ) ಪುಟ್ಟ್ಯಾ—ಹೇಳಲಿಲ್ಲೇನೊ ನೀನು ?

**ಪುಟ್ಟು**:— ( ತಕರಾರಿನ ದನಿಯಲ್ಲಿ ) ಹೇಳಲಿಕ್ಕೆ ಅಂತ ಹೊರಟಿದ್ದೆ— ಅಷ್ಟರೊಳಗೆ ಆಚಾರ್ಯರು ತಾವೆ 'ಬೇಡ' ಅಂತ ಹೇಳಿದರು—

**ವೆಂಕಪ್ಪ**:— (ನಡುವೆಯೆ) ಛೆ-ಛೆ-ಛೆ-ನಾನು ಆ ಮಾತು ಹೇಳಲಿಲ್ಲ-

**ಪುಟ್ಟು**:— ( ವೆಂಕಪ್ಪನಿಗೆ ಹಟದಿಂದ ) ನೀವೇ ಹೇಳಲಿಲ್ಲವೆ ? 'ಒಟ್ಟಿ ಏನೂ ಬ್ಯಾಡ, ಸ್ನಾನ ಮಾಡುವಾಗ ನನ್ನ ಹೊತ್ತುಕೊಳ್ಳೊ ಧೋತರಾನೆ ಒದ್ದೆ ಮಾಡಿ ಕಟ್ಟಿಕೋತೀನಿ, ಬೆಚ್ಚಗಿರೋದು. . . ಆದರ ನನಗೊಂದು ಜನಿವಾರ ಮಾತ್ರ ಬೇಕು-' ಅಂತ—

**ಮುದುಕ**:— ( ಚಕಿತನಾಗಿ ) ಜನಿವಾರ ಬೇಕು ! ಏ, ಹುಚ್ಚು ಹಿಡಿಯುತೇನೊ ನಿನಗೆ ?

**ವೆಂಕಪ್ಪ**:— ( ಗಟ್ಟಿಯಾಗಿ ನಗುವನು. ಎಲ್ಲರು ತನ್ನನ್ನು ನೋಡಲು ನಗೆ ತಡೆದು ) 'ಜನಿವಾರ ಮಾತ್ರ ಬೇಕು !' ಹಹ ! ರಾಯರೆ, ಮೋಸ ಬಿದ್ದಿರಲ್ಲ ನೀವು ! ಜನಿವಾರ ಬೇಕು ಅಂತ ಹೇಳಲಿಲ್ಲ. . ನೊನ್ನೆ ನಮ್ಮೂರೊಳಗೆ ಒಂದು ವಿಚಿತ್ರ ಸಂಗತಿ ಘಟಿಸಿತಂತೆ. . ಕಾಶಿಯೊ, ರಾಮೇಶ್ವರೊ ಎಲ್ಲಿಂದಲೊ ಒಬ್ಬ ಬ್ರಾಹ್ಮಣ ಬಂದಿದ್ದನಂತೆ. . ಬಹಾಳ ಮಡಿವಂತನಂತೆ ! 'ಮಡಿ ದೋತರ ಒಣಹಾಕಲಿಕ್ಕೆ ಹಗ್ಗ-ಕೋಲು ನಡೆಯೋದಿಲ್ಲ, ನನಗೊಂದು ಜನಿವಾರನೆ ಬೇಕು' ಅಂತ ಅಂತಿದ್ದನಂತೆ ! ( ನಗುತ್ತ ) ಹಹ ! ಆ ಕತೆ ಹೇಳತಿದ್ದೆ. . ಕತೆ ಯಾಕೆ ? ಪ್ರತ್ಯಕ್ಷ ಘಟಿಸಿದ ಸಂಗತಿ ಅಂತ ನನಗೆ ಪತ್ರವೆ ಬಂದಿದೆ—ತೋರಿಸುವೆ ಅದನ್ನು. ( ಎಂದು ಕಿಸೆಯೊಳಗಿಂದ ಪುಟ್ಟುಗೆ ಹೆದರಿಕೆ ತೋರಿಸಿದ ಪತ್ರಗಳನ್ನು ತೆಗೆಯುವನು. )

**ಪುಟ್ಟು**:— ( ಲಗಬಗೆಯಿಂದ ) ಆ ಪತ್ರದೊಳಗಿನ ಸಂಗತಿಯೆ ಅದು ! ಹಾಗಾದರೆ, ನನ್ನದೆ ಗ್ರಹಿಕೆ ತಪ್ಪಾಯಿತು. ಇರಲಿ ಬಿಡಿರಿ, ಆಚಾರ್ಯರೆ, ಮೊದಲೇ ತಲೆ ದಿಮ್ ಅನ್ನುವಾಗ ಆ ಪತ್ರ ಯಾಕೆ ಮತ್ತೆ ಓದುವುದು ?

ನನ್ನ ತಪ್ಪು ಒಪ್ಪಿಕೊಂಡೆ ನಾ. (ತಾಯಿಗೆ) ಅವ್ವಾ, ಇವರೆ ಈ ಹೊತ್ತು ದೇವರ ಪೂಜೆ ಮಾಡುವವರಿದ್ದಾರೆ. ಹಹ! ನನ್ನದೆ ತಪ್ಪು!

**ಮುದುಕ**:— (ನಿರಾಶಿತಮುದ್ರೆಯಿಂದ ಉಸಿರೆಳೆದು) ಹಂ.. ವಿನಾಶ ಕಾಲ! ಬುದ್ಧಿಭ್ರಂಶ ಆಗತಾ ಇದೆ— (ಎಂದು ತಲೆಜಾಡಿಸುತ್ತ ಎದುರಿನ ಬಾಗಿಲಿನಿಂದ ಹೋಗುವನು).

**ಅವ್ವ**:— (ಮೆಲ್ಲಗೆ) ಏನೊ—ಪುಟ್ಟೂ, ಆದದ್ದಾದರೂ ಏನು?

**ಮುದುಕ**:— (ಕೂಡಲೆ ಸಿಡಿಲಿನಂತೆ ಬಂದು ಹೆಂಡತಿಗೆ) ಏ — ನೀನು ಯಾಕೆ ಬರತೀ ಇಲ್ಲಿ ಅಡಿಗೆಮನೆ ಬಿಟ್ಟು? ಒಳಗೆ ಯಾರೂ ನೋಡುವವ ರಿಲ್ಲ, ಆ ಹಾಳು ಬೆಕ್ಕು ಬಂದು ನನ್ನ ಮಡಿಸೀರಿನ ತಂಬಿಗೆ ಎಲ್ಲಾ ಉರು ಳಿಸಿಬಿಟ್ಟಿತು! ಮುದ್ರೆ ಒಡೆದುಕೊಳ್ಳೋದಷ್ಟೆ ಬರೆದಿದೆ ನನ್ನ ಹಣೆಯೊಳಗೆ (ಹಣೆ ಬಡೆದುಕೊಳ್ಳುತ್ತ) ಮುಂದೆ ಪೂಜಾ ಮಾಡಿ ಪುಣ್ಯಾಗಳಿಸೋದೇನು ಬರೆದಿಲ್ಲ.. (ಒಮ್ಮೆಲೆ ಸಿಟ್ಟಿನಿಂದ) ಇನ್ನೊಮ್ಮೆ ಬರಲಿ—ಕೊಂದುಕೊಂದು ಬಿಡತೀನಿ ಆ ಹಾಳು ಬೆಕ್ಕನ್ನು— (ಎಂದು ಆವೇಶದಿಂದ ಒಳಗೆ ಹೋಗುವನು).

**ಅವ್ವ**:— (ಮುಗುಳ್ನಗೆಯಿಂದ) ಮನೆಯವರದು ಮುಗೀತು— ಇನ್ನು, ಪಾಪ!— ಆ ಬೆಕ್ಕಿನ ಪಾಳಿ ಬಂದಿತೊ ಏನೊ! (ಒಳಗೆ ಹೊರಡು ವಾಗ ಪುಟ್ಟುಗೆ) ಆಚಾರ್ರು ಸ್ನಾನಕ್ಕೆದ್ದರು ಅಂದ್ರು ಹೇಳು ನನಗೆ. (ಒಳಗೆ ಹೋಗುವಳು).

[ಪುಟ್ಟು ಉಸುರ್ಗರೆದು ಇನ್ನೊಂದು ಕುರ್ಚಿಯಲ್ಲಿ ಬಿದ್ದುಕೊಳ್ಳುವನು. ವಿಚಾರ ಮಾಡುವವನಂತೆ ಆಕಾಶವನ್ನು ನೋಡುತ್ತ ಕೂಡುವನು. ವೆಂಕಪ್ಪನು ಎರಡೂ ಕೈಗಳಿಂದ ತಲೆಯನ್ನು ಗಟ್ಟಿಯಾಗಿ ಹಿಡಿದುಕೊಳ್ಳುವನು ).

**ಪುಟ್ಟು**:— (ವೆಂಕಪ್ಪನನ್ನು ನೋಡಿ) ಯಾಕೆ, ಆಚಾರ್ಯರೆ, ಇನ್ನೂ ತಲೆ ದಿಮ್ ಅಂತಿದೆಯೇನು?

**ವೆಂಕಪ್ಪ**:— (ಸಿಡುಕಿನಿಂದ) ಇಲ್ಲ—ಸಿಡಿದು ಬಿದ್ದೀತು ಅಂತ ಗಟ್ಟಿ ಯಾಗಿ ಹಿಡಿದೀನಿ.

**ಪುಟ್ಟು**:— ಸಿಡಿದು ಬೀಳೋ ಹಾಗಿದ್ದರೆ ಹೊರಗೆ ನಿಂತು ಬಿಡಿರಿ, ನನ್ನ ಕೋಣೆಯೊಳಗೆ ಕೆಸರು ಬೇಡ.

**ವೆಂಕಪ್ಪ**:— (ಸಿಟ್ಟಿನಿಂದ) ಕೆಸರು! ಕೆಸರು ಬೇಕು, ಮನೆ ಆದರೂ

ಕಟ್ಟಲಿಕ್ಕೆ ಬಂದೀತು. ಆದರೆ ನಿನ್ನ ತಲೆಯೊಳಗೆ ಬರಿಯ ಕಸರು ತುಂಬಿದ ಹಾಗೆ ಕಾಣುವುದು.

**ಪುಟ್ಟು**:— (ಅಭಿಮಾನದಿಂದ) ಕಸರು ಅಂದರೆ ಗೊಬ್ಬರ..

**ವೆಂಕಪ್ಪ**:— (ತಿರಸ್ಕಾರದಿಂದ) ಗೊಬ್ಬರ ಅಲ್ಲ—ಬರಿಯ ಅಬ್ಬರ ಅದು! ಅಲ್ಲೊ, ಹೊರಗೆ ಮಾಮುನುಸ್ಮರ ಯುಧ್ಯ ಚ ಅನ್ನುವ ಕೃಷ್ಣನ ಹಾಗೆ ಬಡಾಯಿ ಹೇಳಿಕೊಳ್ಳುವೆ—ಮನೆ**ಯೊಳಗೆ** ಅಂದರೆ ಉತ್ತರ ಕುಮಾರ ಆಗಿರುವೆ— (ಪುಟ್ಟು ನಗಲು) ನಗುವೆ ಏನು? ನನ್ನ ತಂದೆ ಹೀಗೆ ಮಾಡಿದ್ದರೆ—

**ಪುಟ್ಟು**:— (ನಡುವೆಯೆ) ಏನು ಮಾಡತಿದ್ದೆ?

**ವೆಂಕಪ್ಪ**:— ನನ್ನ ತಂದೇನೇ ಜೀವದಿಂದ ಇಲ್ಲ, ಈಗ ಅದನ್ನು ಹೇಳಿ ಏನು ಉಪಯೋಗ?

**ಪುಟ್ಟು**:— ಅಷ್ಟು ಧೈರ್ಯ ಇದ್ದವ ನೀನು—ಆದರೂ ಜನಿವಾರ ಬೇಡುವೆಯಲ್ಲ? ಕೂತುಕೊ ಜನಿವಾರ ಇಲ್ಲದೆಯೆ ಊಟಕ್ಕೆ.

**ವೆಂಕಪ್ಪ**:— (ದರ್ಪದಿಂದ) ನನ್ನ ಮನೆಯೊಳಗೆ ನಾನು ಕೂತುಕೋ ತೀನಲ್ಲ? ನಿನ್ನ ಹಾಗೆ ತನ್ನಿಂದ ಆಗದ ತತ್ವ ಮಂದಿಯ ತಲೆಯ ಮೇಲೆ ಹೇರುವ ವಂಚಕ ನಾನಲ್ಲ. ವಿಧವಾಪುನರ್ವಿವಾಹ ಮಾಡಲೇಬೇಕು ಅಂತ ಹಟ ತೊಟ್ಟು ಒಂದು ಹುಡುಗೆಯ ಮನಸ್ಸಿನೊಳಗೆ ಆಶಾ ಹುಟ್ಟಿಸಿದಿ—

**ಪುಟ್ಟು**:— (ನಡುವೆಯೆ) ವಿಧವಾಪುನರ್ವಿವಾಹ ಮಾಡಲೇಬೇಕು ಅಂದ ಮಾತ್ರಕ್ಕೆ ನಾನೇ ಮಾಡಿಕೊಳ್ಳಬೇಕು ಅಂತ ಹಟ ಏನು? (ತಿರಸ್ಕಾರದಿಂದ) ಏನು ನಿನ್ನ ತರ್ಕ! ನಿನ್ನ ತರ್ಕದ ಪ್ರಕಾರ ಇಂದಿನ ಸಮಾಜಸುಧಾರಕ ಒಬ್ಬ ನಮ್ಮ ಹದಿನಾರು ಸಾವಿರ ಜಾತಿಗಳೊಳಗಿನ ಪ್ರತಿಯೊಂದು ಜಾತಿಯ ಒಂದೊಂದು ಹುಡುಗೇನ್ನ ಮಾಡಿಕೊಳ್ಳ ಬೇಕಾದೀತು!

**ವೆಂಕಪ್ಪ**:— (ಹಟದಿಂದ) ಆದೀತು! ಆಡಿದ ಹಾಗೆ ಮಾಡದಿದ್ದರೆ ನಿನ್ನ ಮಾತು ಕೇಳುವವರು ಯಾರು?

**ಪುಟ್ಟು**:— (ಎದ್ದು ನಿಂತು) ಸರಿ. 'ಬಾಂಧವರೆ, ಪ್ರೇಮವಿವಾಹವನ್ನೆ ಮಾಡತಕ್ಕದ್ದು. ಇವಳಲ್ಲಿ ನನ್ನ ಪ್ರೇಮವಿದೆ. ಆದ್ದರಿಂದ ಇವಳನ್ನು ಮದಿವೆಯಾಗುವೆ.' ಒಂದು. 'ಬಾಂಧವರೆ, ಅಸ್ಪೃಶ್ಯರನ್ನು ಮುಟ್ಟಲು ಯಾವ ಅಡ್ಡಿಯೂ ಇಲ್ಲ. ಇವಳು ಅಸ್ಪೃಶ್ಯಳು. ಆದ್ದರಿಂದ ಇವಳನ್ನು ಮುಟ್ಟಿ ಮದಿವೆಯಾಗುವೆ', ಎರಡು. 'ಬಾಂಧವರೇ, ವಿಧವಾಪುನರ್ವಿವಾಹವು ಅಯೋಗ್ಯವಲ್ಲ. ಇವಳು ವಿಧವೆ. ಆದ್ದರಿಂದ ಇವಳನ್ನು ಮದಿವೆಯಾಗಿ ತೋರಿಸುವೆ', ಮೂರು. 'ಬಾಂಧವರೆ, ಹೆಣ್ಣುಹುಡುಗೆಯರಿಗೆ ಹದಿನಾಲ್ಕು ವರುಷ ಮುಗಿಯುವವರೆಗೆ ಮದಿವೆ ಮಾಡಬಾರದು—ಎಂಬ ಮಾತನ್ನು— ನನ್ನ ಮದಿವೆಯಾದ ಪಕ್ಷದಲ್ಲಿ, ನನಗೆ ಹೆಣ್ಣುಮಗಳು ಹುಟ್ಟಿದ ಪಕ್ಷದಲ್ಲಿ. ಅವಳು ಹದಿನಾಲ್ಕು ವರುಷದ ವರೆಗೆ ಜೀವದಿಂದಿದ್ದ ಪಕ್ಷದಲ್ಲಿ ಹೇಳುವೆ,' ನಾಲ್ಕು. 'ಬಾಂಧವರೆ—'

**ವೆಂಕಪ್ಪ**:— (ಸಿಟ್ಟಿನಿಂದೆದ್ದು ನಡುವೆಯೆ) ಸಾಕು ನಿನ್ನ 'ಬಾಂಧವರೆ!' ನನಗೀಗ ಹಸಿವೆಯಾಗಿದೆ. 'ಪಿಟ್' ಅನ್ನದೆ ಒಂದು ಜನಿವಾರ ಕೊಡು, ಊಟಮಾಡತೀನಿ. ಇಲ್ಲಾ—ತಂದ ಪತ್ರ ನಿಮ್ಮ ತಂದೆಗೆ ತೋರಿಸಿ ಬಂದ ಹಾದಿಯಿಂದ ಹೋಗತೀನಿ.

**ಪುಟ್ಟು**.— (ಅವನನ್ನು ದಿಟ್ಟಿಸುತ್ತ) ನಾನು ಜನಿವಾರ ಹಾಕುವದಿಲ್ಲ ಅನ್ನೋದು ಗೊತ್ತಿಲ್ಲೇನೊ ನಿನಗೆ?

**ವೆಂಕಪ್ಪ**:— ಹಾಕೋದಿಲ್ಲ ಅಂದರೆ? ದಿನಾಲು ಊಟಕ್ಕೆ ಹೇಗೆ ಕೂಡುವೆ?

**ಪುಟ್ಟು**:— ಊಟದ ಸಲುವಾಗಿ ಒಂದು special (ಸ್ಪೆಶಲ್) ಇದೆ.

**ವೆಂಕಪ್ಪ**:— (ಹಟದಿಂದ) ಅದನ್ನೆ ಕೊಟ್ಟು ಬಿಡು.

**ಪುಟ್ಟು**:— (ನಕ್ಕು) ಅಲ್ಲೊ-ಹುಚ್ಚಾ—ನಾನು ಹಾಕುವೆನೊ ಇಲ್ಲೊ ಅಂತ ಊಟಕ್ಕೆ ಕೂತಾಗೊಮ್ಮೆ ನನ್ನ ತಂದೆ ಅದನ್ನು ಇಷ್ಟು ಸೂಕ್ಷ್ಮವಾಗಿ ದಿಟ್ಟಿಸಿ ನೋಡತಿರತಾರೆ, ಅದರ ಒಂದೊಂದು ಎಳೆಯೊಳಗಿನ ಒಂದೊಂದು ನೂಲಿನ ಗುರುತು ಆಗಿ ಹೋಗಿದೆ ಅವರಿಗೆ. ಅದನ್ನ ನೀನು ಹಾಕಿಕೊಂಡೆ ಎಂದರೆ ಒಂದೇಟಿನೊಳಗೆ ನಿನ್ನ ಕಳ್ಳತನ ಹೊರಬೀಳುವುದು.

**ವೆಂಕಪ್ಪ**:— ಆಗಲಿ ಹಾಗಾದರೆ— ( ಎಂದು ಕೋಟನ್ನು ಎತ್ತಿಕೊಳ್ಳಲು ಹೋಗುವನು ).

**ಪುಟ್ಟು**:— ( ಆಶ್ಚರ್ಯದಿಂದ ) ಎಲ್ಲಿಗೆ ಹೊರಟೆಯೊ ?

**ವೆಂಕಪ್ಪ**:— ಊರ ಹೊರಗಿನ ಹನುಮಾನ್ ದೇವರ ಗುಡಿಗೆ. ಅಲ್ಲಿಯ ಮೂರ್ತಿಯ ಕೊರಳೊಳಗೆ ಒಂದು ಜನಿವಾರ ಇರಬೇಕಲ್ಲ ? ನೀನು ' ಕಳ್ಳತನ ' ಅಂದ ಮಾತಿಗೆ ನೆನಪಾಯಿತು.

**ಪುಟ್ಟು**:— (ಗ್ರಾಮೋಫೋನ ತೆರೆಯುತ್ತ) ಹೋಗು ನೀನು— ನಾನು ಇನ್ನೊಂದು ಹಾಡು ಹಚ್ಚುವೆ.

**ವೆಂಕಪ್ಪ**:— (ಕೋಟು ಬಿಟ್ಟು ಓಡಿಬಂದು ಬಲವಾಗಿ ಅವನ ಕೈಯನ್ನು ತಡೆದು) ನನಗೆ ಗೊತ್ತಿದೆ ನಿನ್ನ ಸಂಗೀತಪ್ರೇಮ— ತಡೆಯೋ ! ನೀನು ಹಾಡು ಹಚ್ಚಿದೆ ಎಂದರೆ ಅದನ್ನ ಕೇಳಿ ನಿನ್ನ ತಂದೆಯವರು ಬರಬೇಕು, ನಾನು ಇಲ್ಲದ್ದನ್ನು ನೋಡಿ ಎಲ್ಲಿ ಹೋದೆ ಅಂತ ಕೇಳಬೇಕು, ಆಗ ನೀನು ಅವರನ್ನ ಕರೆದುಕೊಂಡು ಗುಡಿಗೆ ಬಂದು ನನ್ನ ಶ್ರಾವಣೀ- ಶ್ರಾವಣೀ ಏನು ಸುಟ್ಟಿತು !— ನನ್ನ ' ಫಾಲ್ಗುನೀ ' ತೋರಿಸಬೇಕು !

**ಪುಟ್ಟು**.— ( ಸಶ್ಚಿಂತನಂತೆ ) ನಾನು ಮನೆಯೊಳಗೆ ಉತ್ತರಕುಮಾರ- ಆದರೂ ಮನೆಯೊಳಗೆಯೆ ? ಮುಂದಿಯ ಮನೆಯೊಳಗೂ ಉತ್ತರಕುಮಾರ ಅನಿಸಿಕೊಳ್ಳುವ ಯೋಗ್ಯತಾ ನನಗೆಲ್ಲಿಂದ ಬರಬೇಕು ? ( ಉಸುರ್ಗರೆದು ಕುರ್ಚಿಯಲ್ಲಿ ಕುಳಿತುಕೊಳ್ಳುವನು ).

**ವೆಂಕಪ್ಪ**:— ನಾಕ್ಮಾಡೊ ನಿನ್ನ ಉತ್ತರ–ದಕ್ಷಿಣ! ಜನಿವಾರ ಇಲ್ಲ ಅಂತ ನಾನು ಹೆದರೋದಿಲ್ಲ—

**ಪುಟ್ಟು**:— ಅಂದರೆ ಏನಂತ ಹೆದರುವೆ ?

**ವೆಂಕಪ್ಪ**:— ( ಹಟದಿಂದ ) ಹೆದರೋದೆ ಇಲ್ಲ ನಾನು. ಇಲ್ಲಿ ಕೂಡ ತೀನಿ—ಹೊರಗ ಯಾರ್ಯಾರು ಹೋಗತಾರ ನೋಡತೀನಿ–ಗುರುತಿನವರು ಸಿಕ್ಕರು ಅಂದರೆ ಜನಿವಾರ ಬೇಡತೀನಿ. ( ಎಂದು ಕುರ್ಚಿಯಲ್ಲಿ ಕುಳಿತು ಕೊಂಡು ತನ್ನ ಬಲಬದಿಯ ಬಾಗಿಲಿನಿಂದ ಒಂದೇ ಸವನೆ ಹೊರಗೆ ನೋಡುವನು ).

**ಪುಟ್ಟು**:— (ತಾನೂ ಕುಳಿತಲ್ಲಿಂದಲೆ ಅದೇ ಬಾಗಿಲಿನಿಂದ ಹೊರಗೆ ನೋಡುತ್ತ) ಮಧ್ಯಾಹ್ನದ ಹೊತ್ತು ಆಗತಾ ಬಂದಿತು ! ಈಗ ಯಾರು ತಿರುಗಾಡತಿರ

ಬೇಕು ಬೀದಿಯೊಳಗೆ? (ವಿಚಾರ ಮಾಡುವವನಂತೆ) ನಮ್ಮ ದೃಷ್ಟಿಯಿಂದ ಹೇಳೋದಾದರೆ ಬ್ರಾಹ್ಮಣರೆ ತಿರುಗಾಡತಿರಬೇಕು; ತಿರುಗಾಡುವವರಲ್ಲಿ 'ಇವರೆ ಬ್ರಾಹ್ಮಣರು' ಅಂತ ನಮಗೆ ತಿಳಿಯೋದು ಹೇಗೆ? ಹಂ— ಅವರು ಬರಿಮೈಲೆ ತಿರುಗಾಡಬೇಕು. (ಒಮ್ಮೆಲೆ ಸಂಶಯದಿಂದ) ಬರಿಮೈಲೆ ತಿರುಗಾಡೋದು ಹೇಗೆ? ಯಾಕೆಂದರೆ, ಮಧ್ಯಾಹ್ನದ ಹೊತ್ತು ಆಗತಾ ಬಂದಿತು! ಛೆ–ಸುತ್ತಾಡಿ ಮತ್ತೆ ಅಲ್ಲಿಗೆಯೆ ಬಂದು ನಿಲ್ಲುವದು ನನ್ನ ತರ್ಕ. (ವೆಂಕಪ್ಪನು ಈ ಮಾತುಗಳನ್ನು ತಡೆಯದೆ ಕುರ್ಚಿಯಲ್ಲಿ ಚಡಪಡಿಸಿ ಕೊನೆಗೊಮ್ಮೆ ಕುರ್ಚಿಯನ್ನು ಅಪ್ಪಳಿಸಿ ಕುಳಿತುಕೊಳ್ಳಲು) ಹಂ–ಯಾರೊ ಬಂದರು ಅಂತ– (ತಡೆದು ದಿಟ್ಟಿಸುವವನಂತೆ) ಅಹುದೊ? ಅಲ್ಲೊ?— (ಒಮ್ಮೆಲೆ ಸಂತಸದಿಂದ) ಅಹುದೊ ಅಹುದು! ಬ್ರಾಹ್ಮಣರೆ ಅಹುದು! (ವೆಂಕಪ್ಪನು ಹುಬ್ಬುಗಂಟಿನಿಂದ ತನ್ನನ್ನು ನೋಡಲು) ನನ್ನನ್ನು ಯಾಕೆ ಸಿಟ್ಟಿನಿಂದ ನೋಡುವೆ? ನೋಡು ಅಲ್ಲಿ. ಯಾರೊ ದೋತರ ಉಟ್ಕೊಂಡು ದೋತರಾ ಹೊದ್ಕೊಂಡು ಬರುತ್ತಿದ್ದಾರೆ–ಅಲ್ಲವೆ? ಯಾರೊ ನೀರು ತುಂಬುವ ಬ್ರಾಹ್ಮಣ ಕಾಣಿಸ ತಾನೆ. ಇರಬಲ್ಲನ್ಯಾಕೆ! ಜನಿವಾರಕ್ಕೆ ಕೂಡ ಕಟ್ಟಿ ನೀರನೇನು ಜಗ್ಗುವ್ದಿಲ್ಲವಲ್ಲ? (ವೆಂಕಪ್ಪನು ಮತ್ತೆ ತನ್ನನ್ನು ಸಿಟ್ಟಿನಿಂದ ನೋಡಲು) ಅಂದರೆ— ಅವನಿಗೆ ಜನಿವಾರ ಇರುವುದು ಗಟ್ಟಿ ಅಂತ— (ಒಮ್ಮೆಲೆ) ಏ, ಸಮೀಪ ಬಂದ; ಕೇಳೋ–ಕೇಳು—

**ವೆಂಕಪ್ಪ**:— (ತಿರಸ್ಕಾರದಿಂದ) ಸಾಕ್ಮಾಡೊ ನಿನ್ನ ಅಸಹ್ಯ ಹರಟೀನ್ನ!

**ಪುಟ್ಟು**:— (ಅಸಮಾಧಾನದ ದನಿಯಲ್ಲಿ) ಎಲೆ—! ನಿನಗೇ ಸಹಾಯ ಮಾಡಬೇಕು ಅಂದರೆ—

**ವೆಂಕಪ್ಪ**:— (ಮೇಲಿನಂತೆ) ಸುಟ್ಟಿತು ನಿನ್ನ ಸಹಾಯ! ಕಣ್ಣು ಆದರೂ ಇವೆಯೊ ಇಲ್ಲವೊ? ನೋಡು. ಅಲ್ಲಿ ಬರುವವರು ಬ್ರಾಹ್ಮಣ? ನಾಚಿಕೆ ಬರಬೇಕು ನಿನಗೆ! ಪಾಪ! ದೋತರ ಉಟ್ಕೊಂಡು ಬೀದಿಯೊಳಗೆ ನೀರು ಹೊತ್ಕೊಂಡು ಹೋಗುವ ಯಾವುದೊ ಅನಾಥ ಬಡ ವಿಧವಾ ಕಾಣಿಸ್ತಾಳೆ—

**ಪುಟ್ಟು**:— (ಅಪಮಾನಿತನಾದವನಂತೆ) ವಿಧವಾ ಆದರೇನಾಯಿತು? ಬ್ರಾಹ್ಮಣ ಅಲ್ಲೇನು ಆಕೆ?

**ವೆಂಕಪ್ಪ**:— ನಿನ್ನ ನಾಲಗೆಗೆ ತಾಳ–ಮೇಳ ಇಲ್ಲ; ಮನೆಯೊಳಗೇ ಕೂತುಕೊಂಡು ಮುಂದಿಗೆ ಮಾತನಾಡುವೆ! ಜನಿವಾರ ಹುಡುಕುವಾಗ ಯಾವುದೊ ಬಡವಿಧವಾನ ಚೇಷ್ಟಾ ಮಾಡುವೆಯಲ್ಲ?

**ಪುಟ್ಟು**:— ತಪ್ಪಾಯಿತು. ಸಂನ್ಯಾಸಿಗೆ ಜನಿವಾರ ಇರುವದಿಲ್ಲ ಅನ್ನುವುದನ್ನ ಮರೆತಿದ್ದೆ.

**ವೆಂಕಪ್ಪ**:— (ತಿರಸ್ಕಾರದಿಂದ) ಥೂ! ಹೇಸಿ! (ಒಮ್ಮೆಲೆ ಯೋಚನೆ ಹೊಳೆದು) ಓಹೊ! ತಿಳಿಯಿತು ನನಗೆ! ನೀನು ಮನೆಯೊಳಗೆ ಹೇಡಿ ಹೆಂಗಸಿನಹಾಗೆ ಹೆದರಿ ಜನಿವಾರ ಹಾಕಿಕೊಳ್ಳುವೆ ಅಂತ ಹೆಂಗಸರು ಜನಿವಾರ ಹಾಕುತ್ತಿರಬಹುದು ಅನ್ನುವ ಕಲ್ಪನಾ ಬಂದಿತೇನು ನಿನಗೆ?

**ಪುಟ್ಟು**:-(ಹಂಗಿಸುತ್ತ) ಇಲ್ಲ, ಗಟ್ಟಿಗರೆ ಹಾಕಿಕೊಳ್ಳಬೇಕು ಜನಿವಾರ, ನಿನ್ನಂಥಾ ಗಟ್ಟಿಗರು! (ಹೊರಗೆ ನೋಡುತ್ತ) ಅದು ನೋಡು— ಅಲ್ಲಿ ಬೀದಿಯೊಳಗೆ ಒಂದು ಧಷ್ಟಪುಷ್ಟ ಎಮ್ಮೆಯೊ ಕೋಣವೊ ಹೊರ ಟಿದೆ— ಅದಕ್ಕೆ ಕೇಳು 'ಜನಿವಾರ ಇದೆ ಏನು?' ಅಂತ!

**ವೆಂಕಪ್ಪ**:— (ಹೊರಗೆ ನೋಡುವಾಗ ಏನನ್ನೊ ಕಂಡು ಮುಖವು ಕ್ರಮೇಣ ಅರಳುವುದು. ಪುಟ್ಟುವಿನ ಮಾತಿನ ಕಡೆ ಅವನ ಲಕ್ಷ್ಯವೆ ಇಲ್ಲ. ದಿಟ್ಟಿಸುತ್ತ ಕೊನೆಗೆ ಆನಂದದಿಂದ ಉಸುರ್ಗರೆದು) ಹಂ! ಇಲ್ಲಿ ಮಾತ್ರ ಏನೊ ಸಿಗುವ ಸಂಭವ ಏವೆ.

**ಪುಟ್ಟು**:— (ತನಗೆ ಕಾಣದ್ದರಿಂದ ತುಸು ಸಿಟ್ಟಿಸಿಂದ) ಎಲ್ಲಿ?

**ವೆಂಕಪ್ಪ**:— (ತೋರಿಸುತ್ತ) ಅದು ನೋಡು. ಅಲ್ಲಿ ಪೋಸ್ಟಮನ್ ಹೊರಟಾನೆ. ಈ ಕಡೆಗೇ ಬರತಾ ಇದ್ದಾನೆ.. ನಿಮ್ಮ ಪತ್ರ ಇಲ್ಲದಿದ್ದರೂ ನಿಮ್ಮ ಮನೆಯಮೇಲಿನಿಂದಂತೂ ಹಾಯ್ದು ಹೋಗುವನಲ್ಲ?

**ಪುಟ್ಟು**:— (ತಿರಸ್ಕಾರದಿಂದ) ಪೋಸ್ಟಮನ್! ಬಂದರೂ ಮುಂದಿನ ಬಾಗಲಿಗೆ ಹೋಗುವವ ಅವ, ಈ ಬಾಗಿಲಿಗೆ ಬರುವುದಿಲ್ಲ.

**ವೆಂಕಪ್ಪ**:— (ಪುಟ್ಟುವನ್ನು ದಿಟ್ಟಿಸಿ ಹಿರಿತನದಿಂದ) ಬರದಿದ್ದರ ಕೈಮಾಡಿ ಕರೀತೀಸಿ. ಇಷ್ಟು ಕೂಡಾ ತಿಳಿಯಬಾರದೆ ನಿನಗೆ?

**ಪುಟ್ಟು**:—(ಅವನಿಗಿಂತಲೂ ಹಿರಿಯನೆಂಬಂತೆ) ಅವನನ್ನ ಇಲ್ಲಿ ಕರೆದು

ಜನಿವಾರ ಬೇಡುವವನೆ ನೀನು! ಸರಕಾರೀ ಸೇವಕನ ಕೆಲಸದಲ್ಲಿ ಅಡ್ಡ ಬರೋದು ಅಪರಾಧ ಇದೆ, **ಅಪರಾಧ.** ಗೊತ್ತಿದೆಯೋ ಇಲ್ಲವೊ?

**ವೆಂಕಪ್ಪ**:— (ಹರಿಹಾಯುವವನಂತೆ) ಅಡ್ಡ ಯಾರು ಬರತಾರೊ? ಪೋಸ್ಟಮನ್ ಅಂದರೆ ಪಬ್ಲಿಕ್ ಸರ್ವ್ಹಂಟ, ಗೊತ್ತಿದೆಯೇನು ನಿನಗೆ? ನಾನು ಅಂದರೆ ಈ ಸಂದರ್ಭದಲ್ಲಿ ಪಬ್ಲಿಕ್, ತಿಳಿಯಿತೆ? ಅಂದಮೇಲೆ ಅವನು ನನ್ನ ಸೇವೆ ಮಾಡಲೇಬೇಕಲ್ಲ? (ಪುಟ್ಟು ನು ತಿರಸ್ಕಾರದಿಂದ 'ಹುಂ' ಎಂದು ಉಸಿರೆಳೆಯಲು) ನಿನಗೇನಾಯಿತು ತಿದಿ ಊದಲಿಕ್ಕೆ?

**ಪುಟ್ಟು**:— ನಿನ್ನ ಹುಚ್ಚುತನಕ್ಕೆ ಸೀಮಾನೇ ಇಲ್ಲ! ಅಲ್ಲೋ— ಇಷ್ಟು ಮಾಡಿಯೂ ಅವನು ಬ್ರಾಹ್ಮಣನೆ ಇದ್ದಾನೆ ಅನ್ನುವದು ಹೇಗೆ?

**ವೆಂಕಪ್ಪ**:— ನಿನ್ನ ದಡ್ಡತನಕ್ಕೆ ಸೀಮಾನೇ ಇಲ್ಲ! ಬಾಹ್ಮಣ ಅಲ್ಲದಿದ್ದರೂ ಪೋಸ್ಟಮನ್ ಅಹುದೊ ಅಲ್ಲೊ? ಕೊನೆಗೆ ಏನಿಲ್ಲೆಂದರೂ ಅವನ ಕಡೆ ಒಂದು book-post (ಬುಕ್-ಪೋಸ್ಟ), ಒಂದು V. P. (ವ್ಹಿ. ಪಿ.), ಒಂದು parcel (ಪಾರ್ಸಲ್) ಏನಾದರೂ ಇರಬಹುದೊ ಇಲ್ಲೊ? ಅದರೊಳಗೆ ಯಾವುದು ಒಂದಕ್ಕಾದರೂ ಒಂದಿಷ್ಟು ಬಿಳಿಯ ದಾರ ಕಟ್ಟಿರಬಹುದೊ ಇಲ್ಲೊ? ಸಾಕು ಆ ದಾರ ಸಿಕ್ಕರೆ ಸಾಕು. (ನಗುತ್ತ) ನಗಡಿ ಆಗಿದೆ ಅಂತ ಹೇಳಿ 'ಜಡಿದಾರ' ಇದೆ ಅಂದು ಬಿಟ್ಟರಾಯಿತು! (ಮತ್ತೆ ನೋಡುತ್ತ ಮುಖವರಳಿ) ಹಂ—ಇದೇ ಮನೆಯ ಕಡೆಗೆ ಬಂದ! (ಎದ್ದು ಬಾಗಿಲಿಗೆ ಹೋಗುವಾಗ ತಿರುಗಿ ನಿಂತು ಪುಟ್ಟುನಿಗೆ) ನಾನು ಅವನನ್ನು ಮಾತಾಡಿಸುವಾಗ ನೀನು ಏನಾದರೂ ಹುಚ್ಚುಚ್ಚು ಮಾತ ನಾಡಿದೀ ಅಂದರೆ ನೋಡು! ನಾನೇ ಪೋಸ್ಟಮನ್ ಆಗತೀನಿ—ಈ ನನ್ನ ಕಿಸೆಯೊಳಗಿನ ಪತ್ರ ನಿನ್ನ ತಂದೆಯ ಕೈಯೊಳಗೆ ಇಟ್ಟು ಬಿಡತೀನಿ.

[ಎಂದು ಎದ್ದು ಬಾಗಿಲಿಗೆ ಹೋಗಿ ಚಪ್ಪಾಳೆ ಇಕ್ಕಿ, 'ಶಶ್, ಶಶ್' ಎಂದುಸುರಿ, ಕೈಸನ್ನೆಯಿಂದ ಕರೆಯುವನು. ಪುಟ್ಟುನು ಕೈಚಲ್ಲಿ ಬಂದು ಮಂಚದ ಮೇಲೆ ಕುಳಿತು ಕೊಳ್ಳುವನು. ಇಷ್ಟರಲ್ಲಿ 'ಒಳಗೆ ಬಾ, ಒಳಗೆ ಬಾ' ಎನ್ನುತ್ತ ವೆಂಕಪ್ಪನು ನಡೆದು ಬಂದು ತನ್ನ ಕುರ್ಚಿಯಲ್ಲಿ ಕುಳಿತುಕೊಳ್ಳುವನು. ಪೋಸ್ಟಮನ್ನನು— ಯೋಗ್ಯವಾದ ವೇಷದಲ್ಲಿ— ತುಸು ಸಂಶಯಿತ ಮುದ್ರೆಯಿಂದಲೆ ಒಳಗೆ ಬಂದು ನಿಂತು ಅತ್ತಿತ್ತ ನೋಡಿ—]

**ಪೋಷ್ಟಮನ್**:— (ವೆಂಕಪ್ಪನಿಗೆ) ನಿಂ ಪತ್ರ ಏನಿಲ್ಲರಿ, ಸಾಹೇಬರ—

**ವೆಂಕಪ್ಪ**:— (ದೊಡ್ಡ ಮನಸಿನ ನಗೆಯೊಂದನ್ನು ನಕ್ಕು) ಪತ್ರ! ಪತ್ರ ಯಾರಿಗೆ ಬೇಕಾಗಿದೆ? (ಅವನನ್ನು ದಿಟ್ಟಿಸುತ್ತ ಕನಿಕರದಿಂದ) ಪಾಪ! ಇಂಥಾ ಬಿಸಿಲಿನೊಳಗೆ ಏನು ದುಃಸ್ಥಿತಿ ಅಂತೀನಿ ನಿನ್ನದು!

**ಪುಟ್ಟು**:— ಬುಕ್-ಪೋಸ್ಟ್, ವಿ. ಪಿ., ಪಾರ್ಸಲ್ ಏನಾದರೂ ಇದೆ ಏನು?

**ವೆಂಕಪ್ಪ**:— (ಪುಟ್ಟುವಿಗೆ) ನನ್ನ ಕಿಸೆಯೊಳಗೆ ಒಂದು ಪತ್ರ ಇದೆ ನಿಮ್ಮ ತಂದೆಯುವರದು— (ಮೆಲ್ಲನೆ ಹಲ್ಲು ಕಡಿಯುತ್ತ) ಕೊಡತೀನಿ ಅಂದೆ ಅದನ್ನ! (ಪೋಸ್ಟಮನ್ನನಿಗೆ) ಕೂತುಕೊ, ಅಣ್ಣಾ, ಕೂತುಕೊ; ಏನೂ ಹೆದರಬೇಡ. (ಕೋಟಿನ ಕಿಸೆಯೊಳಗಿಂದ ತೆಗೆದು) ತೆಗೆದುಕೊ ಇದನ್ನ— ಒಂದಾಣೆ. (ಪೋಸ್ಟಮನ್ನನು ಅನುಮಾನಿಸುವಂತಿರಲು) ಇಲ್ಲಿಂದ ಹೊರಗೆ ಬೀಳೋದೊಂದೇ ತಡ, ಈ ಆಣೆ ಕೊಟ್ಟು ನೀನು ಚಹ ಇಲ್ಲ ಮತ್ತೇನಾದರೂ ಕುಡಿದು ವಿಶ್ರಾಂತಿ ಪಡೆಯಲಿಕ್ಕೇ ಬೇಕು. (ಹಟದ ದನಿಯಲ್ಲಿ) ಇಲ್ಲದಿದ್ದರೆ ನನಗೆ ಸಮಾಧಾನ ಆಗೋ ಹಾಗೇ ಇಲ್ಲ (ಎಂದು ಒಂದಾಣೆಯನ್ನು ಕೊಟ್ಟು) ಹಂ—ನೀನು ಮೊದಲು ಆ ಹನುಮಾನ್ ಬೀದಿಯೊಳಗೆ ಪತ್ರ ಹಂಚತಿದ್ದಿಲ್ಲ?

**ಪೋಸ್ಟಮನ್**:— (ಒಮ್ಮೆಲೆ) ಛೆ-ಛೆ-**ಎಂದಿಗೂ** ಇಲ್ಲ, ಸಾಹೆಬರೆ.

**ವೆಂಕಪ್ಪ**:— (ವಿಚಾರಿಸುತ್ತ) ಎಂದಿಗೂ ಇಲ್ಲ? ಎಷ್ಟೋ ಸಲ ನೋಡಿದ ಹಾಗಿದೆ ನಿನ್ನ ಅಲ್ಲ?

**ಪೋಸ್ಟಮನ್**:— (ಹೆಚ್ಚಾದ ಹಟದಿಂದ) ಆ ಬೀದಿಯೊಳಗೆ ನನ್ನ ಪಾಳಿ ಬರೋದು ಶಕ್ಯನೆ ಇಲ್ಲರಿ.. ಅದೊಂದು ಕರಾರನೆ ಮಾಡಿಕೊಂಡ ಹಾಂಗ ಆಗೇತಿ ಡಿಪಾರ್ಟಮೆಂಟೇ ಜೋಡಿ. 'ಅದೊಂದು ಬೀದೀನ್ನ ತಪ್ಪಿಸಬೇಕು ನನಗ, ಬೇಕಾದರ ನಡರಾತ್ರಿಯಾಳಗ ಮಸಣಕ್ಕ ಹೋಗಿ ಕೊಟ್ಟು ಬರತೀನಿ ಏನಾದರೂ ಬರೋಡೆ ಹಂಚೋದಿದ್ದರೆ' ಅಂತ ನಮ್ಮ ಮಾಸ್ತರ ಸಾಹೇಬರಿಗೂ ಹೇಳಿಕೊಂಡೀನ್ರಿ....ಅಲ್ಲಿ ನಮ್ಮ ಮಾವನ ಮನೆ ಐತಿರಿ!

**ಪುಟ್ಟು**:— ( ನಡುವೆಯೆ ) ಮಸಣದೊಳಗೆಯೆ?

**ಪೋಸ್ಟಮನ್**:— ( ಸಿಡುಕಿನ ದನಿಯಲ್ಲಿ ) ಮಸಣದೊಳಗಿದ್ದರೆ ನಾ ಎಲ್ಲಿ ತಕರಾರು ಮಾಡತಿದ್ದೆನರಿ? ಹನುಮಾನಾ ಬೀದಿಯೊಳಗೈತಿರಿ ನಮ್ಮ ಮಾವ ಅನ್ನುವವನ ಮನೆ!

**ವೆಂಕಪ್ಪ**:— ( ನಗೆಯಿಂದ ) ಮಾವನ ಮನೆಗೆ ಯಾವ ರೀತಿಯಿಂದಲೂ ಮನಿಯಾರ್ಡರ ಮುಟ್ಟಿಸಬಾರದು ಅಂತ ಹಟ ಏನು?

**ಪೋಸ್ಟಮನ್**:— ( ಮೇಲಿನಂತೆ ) ಹಾಂಗಲ್ಲರಿ. . ನಮ್ಮದೂ ಅವರದೂ ಬೀಗತನದ ತಂಟೆ ಆಗೇತಿರಿ. . ಆ ಓಣಿಯೊಳಗ ಕಾಲಿಡಲಾಕಿಲ್ಲ ಅಂತ ಹಟ ತೊಟ್ಟೇನಿರಿ, ಸಾಹೇಬರ!

**ವೆಂಕಪ್ಪ**:— ( ವಿಚಾರಿಸುತ್ತ ) ಎಲ್ಲಿಯೋ ನೋಡೀನಿ ನಿನ್ನ !

**ಪುಟ್ಟು**:— To obstruct a public servant in the lawful pursuit of his—

**ಪೋಸ್ಟಮನ್**:— ಒಂದು ಅಡಿಕೀ ಹೋಳು ಐತೇನಿರಿ?

**ವೆಂಕಪ್ಪ**:— ( ಲಕ್ಷ್ಯವಿಲ್ಲದವನಂತೆ ನಟಿಸಿ ಒಮ್ಮೆಲೆ ಹೊಸ ಹೊಳೆದಂತೆ ) ಹಂ—ಈಗ ನೆನಪಾಯಿತು, ನೋಡಿದ ಕೂಡಲೆ ನಿನ್ನ ಕರೆಯಬೇಕು ಅಂತ ಯಾಕೆ ಅನಿಸಿತು ಅಂತ! ಅದೇ ಅಂತೀನಿ! ಎಷ್ಟೋಸಲ ನೋಡತಾ ಇದ್ದೆ ನಿನ್ನ; ನೋಡಿದಾಗೊಮ್ಮೆ ವಿಚಾರ ಬರುತ್ತಿತ್ತು. ‘ ಅಲ್ಲ—ಈ ಪೋಸ್ಟಮನ್ನರನ್ನ ಇಷ್ಟು ಯಾಕೆ ದುಡಿಸಿಕೊಳ್ಳತಾರೆ? ಅವರಿಗೆ ಕೆಲಸ ಆದರೂ ಕಡಮೆ ಮಾಡಬೇಕು, ಸಂಬಳ ಆದರೂ ಹೆಚ್ಚು ಮಾಡಬೇಕು? ಎರಡೂ ಇಲ್-ಅಂದರೆ ಒಂದೂ ಇಲ್ಲ. . ಯಾಕಿಲ್ಲ? ಅವರು ಬಡವರು ಅಂತ!. . ಅವರೇ ಯಾಕೆ ಬಡವರು?. . ಅವರಿಗೆ ಶಿಕ್ಷಣ ಇಲ್ಲ ಅಂತ! ಅವರಿಗೇ ಯಾಕೆ ಶಿಕ್ಷಣ ಇಲ್ಲ!. . ಅವರು ಬ-ಡ-ವ-ರು ಅಂತ!’. ನಿನ್ನ ಮೊದಲು ನೋಡಿ ನನಗೆ ಈ ವಿಚಾರ ಎಂದು ಬಂದಿತೊ ಅಂದಿನಿಂದ ನಾನು socialist ಅಂದರೆ ಸಾಮ್ಯವಾದಿ ಆದೆ. ಹೆಚ್ಚಿನ ಸಂಬಳ ಸಿಗದೆಯೆ ನಾವು ಬಡವರಾಗಿ ಯಾಕೆ ಉಳೀತೇವಿ? ಅದಕ್ಕೆ ನಮ್ಮ ಸಮಾಜ ಪದ್ಧತಿಯೆ ಕಾರಣ. ನಮಗೆ ಸಂಬಳ ಸಿಗೋದು ನಮ್ಮ ಜಾತಿಗನುಸರಿಸಿ–ಯೋಗ್ಯತಾಕ್ಕೆ ಅನುಸರಿಸಿ ಅಲ್ಲ. ಅಷ್ಟು ದೂರ ಯಾಕೆ? ನಿನ್ನ

ಯೋಗ್ಯತಾದ ತಕ್ಕ ನಿನಗೆ ಸಂಬಳ ಸಿಗುವುದೇನು? ಇಲ್ಲವೇ ಇಲ್ಲ. ಮತ್ತೆ ನಿನಗೆಯೆ ಆ ವಿಚಾರ ಬರಬಾರದು ಅಂತ ಮೊದಲೇ ಒಂದು ರುಪಾಯಿ ಹೆಚ್ಚಿಗೆ ಕೊಡತಾರೆ. ಯಾಕೆ? ನೀನು ಬ್ರಾಹ್ಮಣ ಅಲ್ಲ ಅಂತ!

**ಪೋಸ್ಟಮನ್**:— (ಆಶ್ಚರ್ಯದ ದನಿಯಲ್ಲಿ) ನಾನು ಬ್ರಾಹ್ಮಣ ಜಾತಿಯವನೆ ಇದ್ದೇನಿರಿ?

**ವೆಂಕಪ್ಪ**:— ಆಂ—? (ಎಂದು ದಂಗುವಡೆದಂತೆ ತೋರಿಸಿ, ನಗೆಯಿಂದ) ಕೇಳಿದೆಯಾ, ಪುಟ್ಟೂ, ಇವರು ಬ್ರಾಹ್ಮಣರಂತೆ! (ಪೋಸ್ಟಮನ್ನನಿಗೆ) ಆದಕ್ಕೇ ನಿಮಗೆ ಕಡಿಮೆ ಸಂಬಳ ಇದೆ..ಜಾತಿಯಿಂದ ಸಮಾಜದಲ್ಲಿ ಎಂಥಾ ಅನ್ಯಾಯ ಅಂತೀನಿ!

**ಪುಟ್ಟು**:— To tamper with the loyalty of His or Her Majesty's servants—

**ಪೋಸ್ಟಮನ್**:— (ಸಂಶಯದಿಂದ) ಆನ್ ಹೀಜ್ ಮ್ಯಾಜೆಸ್ಟೀಜ ಸರ್ವೀಸ ಅಂತ ಛಾಪ ಇದ್ದ ಪಾಕೀಟ ಬೇಕೇನ್ರಿ?

**ವೆಂಕಪ್ಪ**:— (ನಕ್ಕು) ಅಲ್ಲ—ನನ್ನ ಮಾತಿಗೆ ಅವರು ಇಂಗ್ಲಿಶಿನಲ್ಲಿ ಒಪ್ಪಿಕೊಂಡರು..ಅದಿರಲಿ, ಈಗ ನೀವು ಬ್ರಾಹ್ಮಣಾ ಅಂದುಕೊಳ್ಳುವಿರಿ–

**ಪೋಸ್ಟಮನ್**:— (ನಡುವೆಯೆ) ಅಂದುಕೊಂಡಷ್ಟಕ್ಕೇ ಅದು.. ಹಗಲು–ಹನ್ನೆರಡು ತಾಸು ಈ ಸೋಗು ಹಾಕಿಕೊಂಡು ಓಣಿಓಣಿ ತಿರುಗಾಡಿದರೆ ಜಾತಿ ಮಾತಿನಾಗಾದರೂ ಉಳಿದೀತಿರಿ? (ಮೆಲ್ಲಗೆ) ಇದ್ದ ಮಾತು ಹೇಳಬೇಕೆಂದರೆ ಒಳಗೆ ಜನಿವಾರ ಕೂಡ ಹಾಕೋದಿಲ್ಲ ನಾನು!

**ವೆಂಕಪ್ಪ**:— (ಮೂರ್ಛೆ ಹೋಗುವವನಂತೆ) ಆಂ— (ಎಂದು ಬಾಯ್ದೆರೆಯುವನು).

**ಪೋಸ್ಟಮನ್**:— (ನಗೆಯಿಂದ) ಒಂದಿಷ್ಟು ಅಡಿಕೇ ಹೋಳು ಐತೇನಿರಿ?

**ಪುಟ್ಟು**:— ಏನು? ಅಡಕೊತ್ತು ಬೇಕಂದಿಯಾ? ಯಾಕೆ? ವ್ಹಿ. ಪಿ., ಬುಕ್‌ಪೋಸ್ಟ, ಪಾರ್ಸಲ್ ಯಾವುದಕಾದರೂ ಕಟ್ಟಿದ ದಾರ ಹರಿಯಬೇಕಾಗಿದೆ ಏನು?

**ವೆಂಕಪ್ಪ**:— (ತನ್ನ ಬೆರಗಿನಲ್ಲಿಯೆ) ಇವನಿಗೂ ಜನಿವಾರ ಇಲ್ಲ! (ಎಂದು ತಲೆ ಹಿಡಿದುಕೊಳ್ಳುವನು).

**ಪೋಸ್ಟಮನ್**:— ( ಜಾರಲು ಹವಣಿಸುತ್ತ ) ಸಲಾಂ ರಿ, ಸಾಹೇಬರ.. ತಮ್ಮ ಹೆಸರ ಹೇಳಿ ಚಹ ಕುಡೀತೀನಿರಿ ( ಎಂದು ಸಲಾಂ ಕೊಟ್ಟು ಹೋಗುವನು ).

**ಪುಟ್ಟು**:— ( ತನ್ನಷ್ಟಕ್ಕೆ ಎಂಬಂತೆ ) ಒಂದಾಣೆಗೆ ಎಷ್ಟು ಜನಿವಾರ ಬರುತ್ತಿದ್ದುವು ? ( ವಿಚಾರಿಸುವನು ).

**ವೆಂಕಪ್ಪ**:— ( ಸಂತಾಪದಿಂದ ) ಉರುಲು ಹಾಕಿಕೊಂಡು ಸಾಯುವಷ್ಟು !

**ಪುಟ್ಟು**:— ಅಲ್ಲ— ಅಂಗಡಿಗೆ ಹೋಗಿ ಕೇಳಿದ್ದರೆ ಎಷ್ಟು ಅಂತ—

[ ಲಗಬಗೆಯಿಂದ ಎಡದ ಬಾಗಿಲಿನಿಂದ ಬಂದು ]

**ಧರೆಪ್ಪ**:— ಅಂಗಡೀಗೆ ಹೋಗಿದ್ದಿನಿರಿ, ಯಣ್ಣಾ; ಆದರ— ( ಎಂದು ಇಬ್ಬರನ್ನ ನೋಡಿ ತಡೆದು ) ದೊಡ್ಡ ಅಣ್ಣಾ ಅವ್ರು ಇಲ್ಲೇನ್ರಿ ?

**ಪುಟ್ಟು**:— 'ಅಣ್ಣಾ ಅವ್ರು' ಯಾಕ ಬೇಕೊ ನಿನಗೆ ?

**ಧರೆಪ್ಪ**:— ಆ ಕಣ್ಣಿಂದಕ ಕನಡಿ ಹಾಕಸಲಾಕ ಕೊಟ್ಟಿದ್ದರ್ರಿ..ಆ ಕನಡಿ ಹಾಕೋವ್ರು 'ಕೂಡ ಇನ್ನಿಟ (ಇನ್ನಿಷ್ಟು)' ಅಂತ ಹೇಳಿದರ್ರಿ— ಅಟರಾಗ ( ಅಷ್ಟರೊಳಗೆ ) ಆ ಈಕೆ— ( ಸುಧಾರಿಸಿಕೊಂಡು ) ಆ ಇವರು ಬೆಟ್ಟಿಯಾದರ್ರಿ—

**ಪುಟ್ಟು**:— ಯಾರೊ ?

**ಧರೆಪ್ಪ**:— ( ಹೇಳಬಾರದೆಂದು ) ನಿಂ ಗುರುತಿಲ್ಲ ಬಿಡಿರಿ ಅವರದು. ಅಣ್ಣಾ ಅವರ ಕಡೆ ಜರೂರ ಕೆಲಸ ಐತಿ, ತಿಳಿಸಿ ಬಾ ಅಂತ ಹೇಳಿದರ್ರಿ—

**ಪುಟ್ಟು**:— ( ಹಟದಿಂದ ) ಯಾರೊ ?

**ಧರೆಪ್ಪ**:— ( ಮರೆತವನಂತೆ ) ಆ ಇವರ್ರಿ— ಆ— ಇವತ್ತೇ, ಊರಿಂದ ಬಂದಾರ— ಎಲೆ !— ಇಟರಾಗೇ ( ಇಷ್ಟರೊಳಗೆಯೆ ) ಮರೀಬೇಕ ?

**ವೆಂಕಪ್ಪ**:— ( ಒಮ್ಮೆಲೆ ಎದ್ದು ) ಪುಟ್ಟು— ( ಧರೆಪ್ಪನಿದ್ದದ್ದು ಲಕ್ಷ್ಯಕ್ಕೆ ಬಂದು ) ಆಂ— ಪುಟ್ಟುರಾಯರೆ, ಹೊರಗ ಬರತೀರೇನು ಒಂದಿಷ್ಟು ? ( ಕೋಟನ್ನು ತೆಗೆದುಕೊಳ್ಳುವನು ).

**ಪುಟ್ಟು**:— ( ಚಕಿತನಾಗಿ ) ಹೊರಗೆ ? ಈಗ ?

**ವೆಂಕಪ್ಪ**:— ( ಕೋಟು ಹಾಕಿಕೊಳ್ಳುತ್ತ ) ನನ್ನ ತಲೆಶೂಲಿ ಅನಿವಾರ

ಆಯಿತು! ಇಲ್ಲಿಯೆ ಸಮೀಪದಲ್ಲಿ ಯಾರನಾದರೂ ಕಂಡು ಒಂದು ಎಳೆ ಆದರೂ ಔಷಧ ತರಲೇಬೇಕು..ಒಂದು ನಿಮಿಷ ತಡ ಆಗುವ ಹಾಗಿಲ್ಲ.. ಬೇಕಾದರೆ ನೀವು ಕೂತುಕೊಳ್ಳಿರಿ, ನಾನೊಬ್ಬನೆ ಹೋಗಿ ಬರುವೆ ಇಷ್ಟ ರೊಳಗೆ. ( ಹೊರಡುವನು ).

**ಪುಟ್ಟು:**— ( ತಟ್ಟನೆ ಎದ್ದು ) ಬಂದೆ–ಬಂದೆ. ಒಬ್ಬರೇ ಹೋದರೆ ನೀವು ತಿರುಗಿ ಬರಲಿಕ್ಕಿಲ್ಲ—ಅಂದರೆ ಹಾದಿ ಸಿಗಲಿಕ್ಕಿಲ್ಲ ನಿಮಗೊಬ್ಬರಿಗೆಯೆ ಅಂತ. ( ಧರೆಪ್ಪನಿಗೆ ) ಏ, ಇಲ್ಲಿ ಬಾ. ( ಧರೆಪ್ಪನು ಸಮೀಪ ಬರಲು ಗ್ರಾಮೋ ಫೋನವನ್ನು ತೆರೆದು, ರೆಕಾರ್ಡನ್ನು ಇಟ್ಟು, ಕೀಲಿ ಕೊಟ್ಟು ) ಇದು ನೋಡು— ಇದನ್ನ ಹೀಗೆ ಸರಿಸು—ಈ ಮುಳ್ಳು ಈ ದಂಡೆಯ ಮೇಲೆ ಇಟ್ಟು ಬಿಡು. ( ವೆಂಕಪ್ಪನು ಲಗಬಗೆಯಿಂದ ಹೊರಗೆ ಹೋಗುವನು ).

**ಧರೆಪ್ಪ:**— ನನಗ ಅಣ್ಣಾ ಅವ್ರ ಕಡೆ ಜರೂರ ಕೆಲಸ ಐತಿರಿ?

**ಪುಟ್ಟು:**— ಬರತಾರೊ ಅವರು—ಇದನ್ನಿಷ್ಟು ನೀನು ಇಟ್ಟುಬಿಡು. ( ಹೋಗುವನು ).

[ ಕೆಲಹೊತ್ತು ನಿಃಶಬ್ದತೆ ]

**ಧರೆಪ್ಪ:**— ( ತಲೆ ತುರಿಸುತ್ತ ಗ್ರಾಮೋಫೋನಿನ ಹತ್ತಿರ ಬಂದು ನೋಡುತ್ತ) ಇದನ್ನ ಸರಿಸಬೇಕ? ( ಸರಿಸಿ ಗಾಬರಿಯಿಂದ ) ಎಲೆ! ತಿರುಗಲಾಕ ಹತ್ತಿತಲ್ಲ ಇದು! ( ಅದರ ಸುತ್ತಲು ಸುಳಿದಾಡುತ್ತ ) ಏ–ಏ– ( ಎಂದು ತಡೆಯಲು ಯತ್ನಿಸಿ ಕೊನೆಗೆ ಎರಡೂ ಕೈಗಳಿಂದ ಅದನ್ನು ಗಟ್ಟಿಯಾಗಿ ಹಿಡಿದು ತಡೆಯುವನು. ಆ ಮೇಲೆ ಮೆಲ್ಲಗೆ ಒಂದು ಕೈಯನ್ನು ಬಿಟ್ಟು ಎತ್ತಿ ಸಮಾಧಾನದಿಂದ) ಹಂ! ನಿಂತ್ಯೇತಿ! ( ಎಂದು ಮೆಲ್ಲಗೆ ಎರಡನೆಯ ಕೈಯನ್ನೆತ್ತಲು ಅದು ಮತ್ತೆ ತಿರುಗುವುದು. ಗಾಬರಿಯಿಂದ ಮತ್ತೆ ಎರಡೂ ಕೈಗಳಿಂದ ತಡೆಯುತ್ತ ) ಎಲೆ—ಮತ್ತೆ ತಿರಗತೇತಲ್ಲ! ಹಿಂದಿನ ಜನಮದಾಗ ಗಾಣದ ಎತ್ತ–ಗಿತ್ತ ಆಗಿತ್ತೇನೊ ಅಂತೀನಿ! ಥೂ! ಆ ಮುಳ್ಳು ಅದರ ಮ್ಯಾಗ ಇಡಬೇಕಂದರ ಒಂದು ಮೆಟ್ಟಿಗಿಗೇ ನಿಂದರವಲ್ಲ ದಲ್ಲ ಇದು ಅಂತೀನಿ! ( ಹತಾಶನಂತೆ ) ಇಟ್ಟು-ಬಿಟ್ಟರಾಯಿತು. 'ಸಣ್ಣ ಅಣ್ಣಾ–ಅವರು ಹೇಳಿದರು, ಇಟ್ಬಿಸಿ' ಅಂತ ಹೇಳಿದರಾತು! ( ಎಂದು ಒಂದು ಕೈಯನು ಬಿಟ್ಟು ಎತ್ತಿ ಅದೇ ಕೈಯಿಂದ ಮುಳ್ಳನ್ನು ಅದರ ಮೇಲಿಟ್ಟು ಎರಡನೆಯ ಕೈಯನ್ನೂ ಬಿಡುವನು. ಕೂಡಲೆ ಹಾಡು ಪ್ರಾರಂಭವಾಗುವದು.

ಅದನ್ನು ಕೇಳಿ ಮೊದಲು ಚಕಿತನಾಗಿ ಆಮೇಲೆ ಆನಂದದಿಂದ) ಎಲೆಲೆಲೆ! ಹೀಗೆಂಗ ಮಾಡಿದರ ಹಾಡತ್ತೈತೇನು ಇದು! ಛಾ(ಚಹ)ದ ಅಂಗ್ಡೀ ವಳಗ ಹಚ್ಚೇ ಹಚ್ಚುತಿಪ್ಟರು—ನನಗೂ ಒಳ್ಳೇ ಗುಂಬ ಗೂಡಾರ್ತ ಅನಿಸಿತ್ತು! ಹಂ—(ಎಂದು ಮೂರಸರಿದು ದರ್ಪದಿಂದ ಎದೆ ಸೆಟೆಸಿ ಅದನ್ನು ನೋಡುತ್ತ ನಿಲ್ಲುವನು).

[ಕೂಡಲೆ ತಪೋಭಂಗದಿಂದ ಕೆರಳಿದ ಮುನಿಯಂತೆ ಘುಡಿಘುಡಿಸುತ್ತ ಎದುರಿನ ಬಾಗಿಲಿನಿಂದ ಬಂದು--- ]

**ಮುದುಕ:** –(ಅಬ್ಬರಿಸುತ್ತ) ಪ–ಪ–ಪ–ಬೇಡ ಅಂತ ಹೇಳಿದರ— ಏ, ಪುಟ್ಯಾ—(ಧರೆಪ್ಪನೊಬ್ಬನನ್ನೆ ನೋಡಿ ತಡೆದು) ಎಲ್ಲಿ ಹೋದರೊ ಎಲ್ಲರೂ?—ಯಾರು ಹಚ್ಚಿದರೊ ಅದನ್ನ?—(ಧರೆಪ್ಪನು ಹೆದರಿಕೆಯಿಂದ ಕಕ್ಕಾವಿಕ್ಕಿಯಾಗುವನು)— ಸರಿಯೊ ದೂರ!—(ಧರೆಪ್ಪನು ಮೂಲೆಗೆ ನಿಲ್ಲಲು ಮತ್ತಿಷ್ಟು ಕೆರಳಿ) ಏ, ಅಲ್ಲಿ ಯಾಕೆ ನಿಂತುಕೊಂಡೆ?–ಮುಚ್ಚೊ, ಮುಚ್ಚು ಅದನ್ನ! (ಧರೆಪ್ಪನು ಮುಚ್ಚಲು ಯತ್ನಿಸುವನು, ಏನೂ ಗೊತ್ತಿಲ್ಲದುದರಿಂದ ಅಲ್ಲಿಂದಲೆ ಸುತ್ತಾಡುವನು) – ಎತ್ತೊ–ಎತ್ತಿಡೊ ಅದನ್ನ! (ಧರೆಪ್ಪನು ಇಡಿ ಯಂತ್ರಕ್ಕೆ ಯಂತ್ರವನ್ನೇ ಎತ್ತಲು) ಅದಲ್ಲೊ, ಕೋಣ!– ಕೆಳಗಿಡು ಅದನ್ನ! ಅದು–ಅದನ್ನ–ಅಯ್ಯೊ–ಥೂ! (ಎಂದು ಚಡಪಡಿಸುವುದರಲ್ಲಿ ಯಂತ್ರವು ತನ್ನಷ್ಟಕ್ಕೆ ತಾನೆ ತಡೆದಿದೆ. ಮುದುಕನೂ ಇಷ್ಟರಲ್ಲೆ ದಣಿದು ದನಿಯನೆಳೆಯುತ್ತ) ಯಾರೊ–? ಯಾರು ಹಚ್ಚಿದರು ಅದನ್ನು?

**ಧರೆಪ್ಪ:**—(ಹೆದರಿದ ದನಿಯಲ್ಲಿ) ಸಣ್ಣ ಅಣ್ಣಾ ಅವ್ರು ಹೇಳಿದರ್ರಿ—

**ಮುದುಕ:**—(ನಡುವೆಯೆ) ಎಲ್ಲಿ ಹೋದರು ಅವರಿಬ್ಬರು?

**ಧರೆಪ್ಪ:**—ಆ ಯಂಕಪ್ಪನೋರನ್ನೋರಿಗೆ ಅಗಸುದ್ದೆ (ಔಷಧ) ಬೇಕಾಯಿತಂತರಿ— ಅವ್ರು ಸಣ್ಣ ಅಣ್ಣಾ ಅವ್ರು ಕೂಡಿ ಹೋದರ್ರಿ—

**ಅವ್ವ:**—(ಒಳಗಿನಿಂದ ಬಂದು) ಮತ್ತೇನಾಯಿತು? (ಪುಟ್ಟು–ವೆಂಕಪ್ಪ ಇಬ್ಬರೂ ಇಲ್ಲದ್ದನ್ನು ನೋಡಿ) ಅಯ್ಯ! ಎಲ್ಲಿ ಹೋದರು ಇವರಿಬ್ಬರೂ?

**ಮುದುಕ:**— ಅದೇ ಕಂಠಶೋಷ ನಡೆಸಿರುವೆ ನಾನೂ! ಮತ್ತೆ ತಾನೂ ಬಂದು 'ಎಲ್ಲಿ ಹೋದರು?' ಅಂತ ದನಿಗೂಡಿಸತಾಳೆ! ಬರಲಿ

ಆ ಪುಟ್ಯಾಗ್ಯ! 'ಬೇಡ' ಅಂತ ಹೇಳಿದರೆ ಬೇಕಂತೇ ಮಂಗತನ ಮಾಡಿ ಹೋಗಿಯಾನೆ!

[ಈ ಮಾತಿನಿಂದ ಮುಂದೆ ಮುದುಕನು ಯಾರು ತನ್ನ ಕೂಡ ಮಾತಾಡುವರೊ ತಟ್ಟನೆ ಅವರ ಕಡೆ ಮುಖ ತಿರುಗಿಸಿ ನಿಲ್ಲುವನು. ಒಮ್ಮೆ ಧರೆಪ್ಪ, ಒಮ್ಮೆ ಹೆಂಡತಿ— ಹೀಗೆ ಮುಖ ತಿರುಗಿಸುವುದರಿಂದ ಕೊನೆಗೆ ಅವನು ಸಿಟ್ಟಿಗೇಳುವ ಪ್ರಸಂಗ ಬರುವುದು.]

**ಧರೆಪ್ಪ**:—(ಸಣ್ಣಾದ ಮುಖದಿಂದ) ಅವರು ಮಾಡಲಿಲ್ರಿ, ಯೆಣ್ಣಾ; ಅವರು ಹೊರಗ ಹೊಂಟಿದ್ದರು ಕಾಣತೈತಿರಿ, ಆಟರಾಗ ನಾ ಬಂದಿನಿ, ನನಗ ಹೇಳಿದರಿ—

**ಮುದುಕ**:—(ಕನಲಿ) ನೀನು ಯಾಕೆ ಸಾಯುಲಿಕ್ಕೆ ಬಂದೆ ಈಗ? ನಿನಗೆ ಕೆಲಸ ಮಾಡಿಕೊಂಡು ಒರಲಿಕ್ಕೆ ಹೇಳಿದ್ದಿಲ್ಲವೆ ನಾನು? ನಾ ಕೊಟ್ಟಿದ್ದಕೆ ಆ ಇದನ್ನ ಹಾಕಿಸಿಕೊಂಡು ಒಂದೆಯಾ?

**ಅವ್ವ**:—(ಸಂಶಯದ ದನಿಯಲ್ಲಿ) ಅಕ್ಕಸಾಲಿಗನ ಮನೆಗೆ ಕಳುಹಿಸಿದ್ದಿರೇನು ಅವನನ್ನ?

**ಮುದುಕ**:—(ಹಂಗಿಸುತ್ತ) ಹುಂ! ಕುಬೇರನ ಪದವಿ ನನಗೇ ಸಿಕ್ಕಿತು. ಮೊದಲು ಮನೆಯೊಳಗೆ ಪತ್ನೀರತ್ನಕ್ಕೆ ಆಭರಣ ಬೇಕು ಅಂತ ಅಕ್ಕಸಾಲಿಗನ ಮನೆಗೆ ಕಳುಹಿಸಿದ್ದೆ ಅವನನ್ನ!

**ಅವ್ವ**:—(ತಾನೂ ಹಂಗಿಸುವ ದನಿಯಲ್ಲಿ) ಒಂದ ದಿವಸ ಕೈಯೊಳಗ ನಾಲ್ಕ ದುಡ್ಡು ಹೆಚ್ಚು ಇದ್ದರೆ ಮನೆಯ ಹೆಂಡತೀನ್ನ ಮರೆತು ಹೊರಗೆ ಹೋಗತಾರ ಇವರು! ಇನ್ನು ಕುಬೇರನ ಪದವಿ ಸಿಕ್ಕರಂತೂ ಆಯಿತು— ಮನೀಯಿಂದಲೂ ಪೆನಶನ್ನೆ!

**ಧರೆಪ್ಪ**:—(ಒಮ್ಮೆಲೆ) ಹುಂ—ಈಗ ನೆನಪಿಗೆ ಒಂತು..ಅಂ—ಅಣ್ಣಾ ಅವ್ರ—

**ಮುದುಕ**:—(ಒಮ್ಮೆಲೆ ಶಾಂತನಾದವನಂತೆ) ನಿನ್ನದೇನು ತಕರಾರು ಇದೆಯಪ್ಪಾ ನಾನು ಕುಬೇರ ಆದರೆ?

**ಧರೆಪ್ಪ**:—(ಏನೂ ತಿಳಿಯದೆ) ಯಾನಂದರಿ?

**ಅವ್ವ**.—(ತಿಳುಹಿಸುತ್ತ) ನಿನಗ ಅಲ್ಲೊ ಅದು! ನನಗ; ಹೊಸ ವಸ್ತ್ರ ಇಡಿಸಿದರು!

**ಧರೆಪ್ಪ:**— ಅಣ್ಣಾ–ಅವ್ರು—

**ಮುದುಕ:**— (ಕನಲಿ) ಏನೊ? ಕನ್ನಡಕಕ್ಕೆ ಕಾಜು ಹಾಕಿಸಿ ಕೊಂಡು ಬಂದೆಯೇನು ಅಂತ ನಾನು ಕೇಳತೀನಿ—ಒಬ್ಬರು 'ಅಕ್ಕ ಸಾಲಿಗ' ಅಂತಾರೆ, ಒಬ್ಬರು 'ಅಣ್ಣಾವ್ರು' ಅಂತಾರೆ! ಥೂ! ನಾರಾಯಣಾ! ನರಹರೀ! (ಎಂದು ಒಳಕ್ಕೆ ಹೊರಡುವನು).

**ಧರೆಪ್ಪ:**— (ದೈನ್ಯದ ದನಿಯಲ್ಲಿ) ಅ–ಣ್ಣಾ ಅ–ವ್ರು—

**ಮುದುಕ:**— (ತಡೆದು ತಿರುಗಿ ನಿಂತು) ಯಾ–ಕೊ?

**ಧರೆಪ್ಪ:**— (ಕಡೆಗಣ್ಣಿನಿಂದ 'ಅವ್ವ' ನನ್ನು ನೋಡುತ್ತ) ನಿಂ ಕಡೆ ಆ ಇವ್ರು–ಆ ಯಾರೂ ಬಂದಾರ್ರಿ—

**ಮುದುಕ:**— (ನಿರ್ಧಾರದಿಂದ) ಈಗ ನಾನು ಆಹ್ನಿಕಕ್ಕೆ ಕೂತೀನಿ. ಯಾರು ಬಂದರೂ ಕಾಣೋದಿಲ್ಲ ಅಂತ ಹೇಳು. ಇನ್ನು ಹೀಗೆ ಹಟ ಹಿಡಿಯದ ಹೊರತು ಈ ಮನೆಯೊಳಗೆ ಒಂದು ಕೆಲಸ ಆಗೋಹಾಗೇ ಇಲ್ಲ. ನನ್ನಷ್ಟಕ್ಕೆ ನಾನು ಆಹ್ನಿಕ ಮುಗಿಸತೀನಿ. ಅಡಿಗೆ ಆಗಲಿ ಬಿಡಲಿ!

**ಅವ್ವ:**— ನನ್ನ ಜೋಡಿ ಮಾತಾಡಿದರ ನಾನು ಹೇಳತೀನಿ. ಅಡಿಗೆ **ಯಾ – ವಾ – ಗೋ** ಆಗೇದ. ಆಚಾರ್‍ರು ಯಾಕೆ ಬರಲಿಲ್ಲ ಅಂತ ನೋಡಲಿಕ್ಕೆ ಬಂದೆ. ಅದೇ ಹೇಳಿದೆನಲ್ಲ—ಅಡಿಗೇನೂ ಮಾಡಬೇಕು ಆಚಾರ್‍ರನೂ ನೋಡಬೇಕು ಅಂತ?

**ಮುದುಕ:**— (ಮೋಕ್ಷಮೋಕ್ಷವಾಗಲಿ ಎನುವ ಹಟದಿಂದ ಸೆಟೆದು ನಿಂತು) ನನಗೆ ಏನ್ಮಾಡಂತೀ–ಹೇಳಿಬಿಡು ಒಮ್ಮೆ.

**ಅವ್ವ:**— ನಾನು ಎಷ್ಟರಾಕೆ ಹೇಳಲಿಕ್ಕೆ? ಹಟ ಹಿಡಿಯದೆ ಕೆಲಸ ಆಗೋದಿಲ್ಲ ಈ ಮನೀವಳಗ ಅಂದಿರಲ್ಲ? ನಿಮ್ಮ ಹಟಾನೇ—

**ಮುದುಕ:**— (ಎರಡೂ ಕೈಗಳನ್ನೆತ್ತಿ ಗಟ್ಟಿಯಾಗಿ ಬಡೆದು ಮುಗಿದು) ಏ–ಮಹಾಮಾಯೇ, ಈ ಮನೆಯೊಳಗೆ ನಾನು ಹಟಹಿಡೀತೀನಿ ಅಂತ ಅರ್ಥ ಅಲ್ಲ. ಪ್ರತಿಯೊಂದು ಕೆಲಸ ಹಟಹಿಡಿದು ಸಾಧಿಸಿಕೊಳ್ಳುವೆ ನೀನು—ಅದಕ್ಕೆ ಹೇಳಿದೆ.

**ಅವ್ವ:**— ಬಿಡಿರಿ, ಹಾಂಗಿದ್ದರೆ ನಾನು ಯಾಕೆ ಹಟ ಹಿಡಿಯಲಿ?

ಹಣಮಂತಾಚಾರ್ರು ನಾಳೆ ಆದರೂ ಬರತಾರೊ ಇಲ್ಲೊ? ಅದಕ್ಕ ಈ ಹೊತ್ತು ಅನಾಯಾಸ ಮನೆಗೆ ಬಂದ್ರ ಈ ಆಚಾರ್ರಿಗೇ ಹೇಳಿಬಿಡಿರಿ ನಾಳಿನ ಅವಿಧವಾನವಮಿ ಸಲುವಾಗಿ–ಅಂತ ಹೇಳಬೇಕು ಅಂತ ಮಾಡಿದ್ದೆ.. ನಾ ಆದರೂ ಯಾಕೆ ಹಟಹಿಡಿಯಲಿ? ಬಿಟ್ಟುಬಿಡಿರಿ. 'ಸವತಿಯ ಅವಿಧವಾನವಮಿ; ಆಕೆಗೇನು ಕಾಳಜಿ?' ಅಂತ ಊರ ಹೆಂಗಸರೆಲ್ಲಾ ನನಗೆ ಆಡಿಕೊಳ್ಳತಾರ. ಆಡಿಕೊಳ್ಳಲಿ! ನನ್ನದೆ ಅವಿಧವಾನವಮಿ ಬರೋ ತನಕ ಆಡಿಕೊಳ್ಳಲಿ! ಮನೆಯವರಿಂದೇ ಆಡಿಸಿಕೊಳ್ಳಬೇಕು ಮಂದಿಯವ ರಿಂದ ಆಡಿಸಿಕೊಳ್ಳಬಾರದು ಅಂತೇನು ಶಾಸ್ತ್ರ ಇಲ್ಲವಲ್ಲ! (ಉಸುರ್ಗರೆ ಯುವಳು).

**ಮುದುಕ:**— (ಹೆಂಡತಿಯನ್ನು ದಿಟ್ಟಿಸುತ್ತ) ಮುಗಿಯಿತೊ?

**ಅವ್ವ:**— (ಸಿಡುಕಿಸಿಂದ) ಮುಗಿಯಿತು ಅನಲಿಕ್ಕೆ ನಾ ಏನು ಕತೆ ಹೇಳತಿದ್ದೆನೆ ಏನು?

**ಮುದುಕ:**— (ಧರೆಪನಿಗೆ) ನಿನ್ನದೇನು ಹೇಳೋದಿದೆ? ಹುಂ— ಹೇಳಿಬಿಡು. ಮುದುಕ ಆದೆ. ನನ್ನ ಮಾತು ಇನ್ನು ಯಾರೂ ಕೇಳೋ ದಿಲ್ಲ. ಇನ್ನು ನಾನೇ ಎಲ್ಲರ ಮಾತು ಕೇಳಿಕೋತಿನಿ—ಕಿವುಡ ಆಗುವ ತನಕ! (ಉಸುರ್ಗರೆದು) ಅಷ್ಟರ ಹುಟ್ಟಿಗೆ ಕುರುಡ ಅಂತು ಎಂದಿಗೊ ಆಗಿಬಿಟ್ಟೇನಿ—

**ಧರೆಪ್ಪ:**—(ತನ್ನದೆ ತಪ್ಪು ಎಂಬಂತೆ) ಇಲ್ಲರಿ, ಅಣ್ಣಾ; ತರತೀನಿರಿ.. ಕುಂತ ಮೆಟ್ಟಿಗೀ ಮ್ಯಾಗ ತಂದೇ ಬಿಡತಿದ್ದಿನಿರಿ; ಆಟರಾಗ ಅವರು ಟಾಂಗಾದಾಗ ಹೋಗತಿದ್ದರ್ರಿ..ನನ್ನ ನೋಡೋಣ ಗಬಕ್ಕನೆ ಟಾಂಗಾ ತರುಬಿದರಿ—ನನ್ನ ಗುರುತೆ ಹಿಡಿದರ್ರಿ!—'ನಾವು ಬಂದಿವಿ ಅಂತ ನಿಮ್ಮ ಯಜಮಾನೋರಿಗೆ ಹೇಳು' ಅಂತ ಹೇಳಿದರಿ—

**ಮುದುಕ:**— (ಅವನನ್ನು ದಿಟ್ಟಿಸಿ) ಹುಚ್ಚು ಹಿಡಿದಿದೆ ಏನೊ? ಯಾರ ಮಾತು ಹೇಳತೀಯೊ?

**ಅವ್ವ:**— (ಧರೆಪ್ಪನಿಗೆ) ಯಾರ ಮಾವನವರಿಗೆ ಹೇಳು—ಅಂದರು?

**ಧರೆಪ್ಪ:**— ಯಾರ ಮಾನೋರು ಅಲ್ಲರಿ, ಯವ್ವಾ; ಯಜ ಮಾನೋರು–ಅಂದರ್ರಿ.

**ಅವ್ವ:**— ಯಜಮಾ— (ಒಮ್ಮೆಲೆ) 'ಯಜಮಾನರು' ಅಂತ ಅವರೇ ಅಂದರೇನೊ?

**ಧರೆಪ್ಪ:**— (ತಲೆತೂಗಿ) ಅವರೇ ಅಂದರ್ರಿ..ಅದಕೇ ಹೇಳಿದೆನಲ್ರಿ ಗುರುತು ಹಿಡಿದ್-(ಒಮ್ಮೆಲೆ) ಅವರೇ ಅಂದರ್ರಿ, ಯವ್ವಾ, ಅವರೇ ಅಂದಹಾಂಗ ಆಯಿತಿರಿ—ಕೇಳಿಸಿತು ಅನ್ನರಿ.

**ಅವ್ವ:**— (ತಿರಸ್ಕಾರದಿಂದ) ಹುಂ! ಯಾರಿಂದ ಮುಚ್ಚಿ ಇಡತೀಯೋ ಏ ಹೊಲ್ಯಾ? ಗುರುತು ಹಿಡಿದರು—ಅಂತ! ಹಿಡಿಯದೆ ಏನು ಮಾಡ್ತಾಳ ಹಿಡಿ-ಹಿಡಿ ದುಡ್ಡು ಹಿರಿದುಕೊಂಡು? ಮ್ಯಾಲಿಂದ ಮ್ಯಾಲೆ ಬರಗಾಲ ಬಂಧಾಂಗ ಬಂದು ಮನೆ ತೊಳದು ಹೋಗ್ತಾಳೆ! ಇದರ ಕುಲ ಹಾಳಾಗಲಿ! (ಎಂದು ಶಪಿಸುತ್ತ ಆರ್ಭಟೆಯಿಂದ ಒಳಗೆ ಹೋಗುವಳು).

**ಮುದುಕ:**— (ಹೆಂಡತಿಯು ಹೋದುದಕ್ಕೆ ಚಕಿತನಾಗಿ, ಏನೂ ತಿಳಿಯದ ತುಸು ಸಿಟ್ಟಿನಿಂದ) ಏನೊ ಇದು? ಯಾರು ಬಂದದ್ದು? ಏನು ಅಂದದ್ದು?

**ಧರೆಪ್ಪ:**— (ಸಮೀಪ ಬರುತ್ತ ಮೆಲ್ಲಗೆ) ಆ ಇವರ್ರಿ—

**ಮುದುಕ:**— (ತಟ್ಟನೆ ದೂರ ಸಿಡಿದು) ಹಂ—! ಮುಟ್ಟಿಯೊ ನನ್ನ! ಹುಚ್ಚುಮುಂಡೆಗಂಡ!

**ಧರೆಪ್ಪ:**— (ತಲೆ ತುರಿಸುತ್ತ) ಏಟ(ಎಷ್ಟು) ಸಾರೆ ಬಂದು ಇದೇ ಮನ್ಯಾಗ ಗಿಣಿ(ಗಿಳಿ) ಹಾಂಗ ಹಾಡಿ ಹೋಗ್ಯಾರ! ಆಕೇ ಹೆಸರು ಧ್ಯಾಸ (ಸ್ಮರಣೆ) ದಾಗ ಬರವಲ್ಲದು! (ಮುದುಕನನ್ನು ನೋಡುತ್ತ) ಹಬ್ಬ ಸಂರಂಬ (ಸಮಾರಂಭ) ದಾಗ ಬರತಿರತಾಳಲ್ಲರಿ, ಅಣ್ಣಾ ಅವ್ರು?

**ಮುದುಕ:**— (ಕುತೂಹಲ ಹೆಚ್ಚಾಗಿ ಧರೆಪ್ಪನ ಹತ್ತಿರಬಂದು) ಯಾರೊ! (ಮೆಲ್ಲಗೆ) ನನ್ನ ಕಡೆ—

**ಧರೆಪ್ಪ:**—(ಒಮ್ಮೆಲೆ) ಹಾಂ ಹಾಂ! ಆಕೀನೇ ನೋಡಿರಿ!

**ಮುದುಕ:**— ದೂರ ಸರಿಯೊ! ಮುಟ್ಟಿಗಿಟ್ಟೀ?

**ಧರೆಪ್ಪ:**— (ಲಕ್ಷ್ಯವಿಲ್ಲದೆ) ನನ್ನ ನೋಡಿದೋಣ ತಾನೇ ನನ್ನ ಗುರುತು ಹಿಡಿದಳ್ರಿ, 'ಅಣ್ಣಾ ಅವ್ರು ಹ್ಯಾಂಗ ಅದಾರು' ಅಂತ!

**ಮುದುಕ:**— (ಎಲ್ಲ ತಿಳಿದರೂ ತೋರಗೊಡಬಾರದೆಂದು) ಶುಂಭ!

ಏನ್ಸಾಶಾಪ್ಸೊ ಏನೊ! ಯಾರನಾದರೂ ಹಾದಿಯೊಳಗೆ ಹೋಗು ವವರನ್ನ ನೋಡೋದು—

**ಧರೆಪ್ಪ**:—( ನಡುವೆಯೆ ) ಹಾದಿಹೋಕ ಅಲ್ಲರಿ, ಅಣ್ಣಾ; ನಿಮ್ಮ ಪೈಕೀನೇ—

**ಮುದುಕ**:—( ನಗೆಯಿಂದ ) ನಿದ್ದೆ ಮಾಡತಿದ್ದೆ ಏನು ನೀನು ಆ ಕಣ್ಣಿನ ಕೃಷ್ಣಪ್ಪನ ಅಂಗಡಿಯೊಳಗೆ?

**ಧರೆಪ್ಪ**:—( ನೊಂದು ) ಇಲ್ರಿ, ಅಣ್ಣಾ; ಆ ಕಿಟ್ಟಪ್ಪನೋರು ಕೇಳಿದರು ನನಗ 'ಯಾರು?' ಅಂತ; ಅವರಿಗೆ ಸುಳು ಹತ್ತಗೊಟ್ಟೆಪ್ಪನರಿ **ನಾನು!** 'ಎಲ್ಲಿ ಇರತಾರೊ?' ಅಂತ ಕೇಳಿದರು. 'ನಮಗ್ಯಾಕರಿ ಅಂಥಾ ಮಂದಿ ಜೋಡಿ?' ಅಂದನಿರಿ! ( ಮುದುಕನು ಸಿಟ್ಟಿನಿಂದ ತನ್ನನ್ನು ನೋಡಲು ನಗೆ ಯಿಂದ ) ಹಾಂಗ ಕೇಳಿದರ ಟಾಂಗಾ ನಡೆಯೋದರಾಗ ನನಗ ಹೇಳಿದ್ದರಿ ಅವರು 'ಅದೇ ತ್ಸಾ (ತೋ)ಟದ ಬಂಗಲೇದಾಗ ಇರತೀವಿ' ಅಂತ! ಹ ಹ! ಕಿಟ್ಟಪ್ಪನೋರಿಗೆ ಮಾಸನೀ ಹತ್ತಗೊಡಲಿಲ್ಲ ಬಿಡಿರಿ—ಹ ಹ!

**ಮುದುಕ**:—( ಸಿಡುಕಿನ ಸೋಗಿನಿಂದ ) ಹುಂ! ಬಹಾಳ ಬುದ್ಧಿವಂತ ಇದ್ದೀ ಹೋಗು! ಒಂದು ಕೆಲಸ ಮಾಡಿಕೊಂಡು ಬಾ ಅಂದರೆ ಮತ್ತೊಂ ದೇನಾದರೂ ಕಟ್ಟಿಕೊಂಡು ಬರತಾನೆ!

**ಧರೆಪ್ಪ**:—( ತೊದಲು-ತಡೆದು ) ಆ-ಇದನ್ನ-ಇವತ್ತೇ ತರಬೇಕೇನ್ರಿ?

**ಮುದುಕ**:—ಈಹೊತ್ತೆ ಅಂದರೆ? ಮೊದಲೇ ಹೇಳಿದ್ದಿಲ್ಲೇನು 'ಕೂತು ಹಾಕಿಸಿಕೊಂಡು ಬಾ' ಅಂತ?

**ಧರೆಪ್ಪ**:—ಅದನ್ನಲ್ಲರಿ..ಅದನ್ನ ಈಗ ತರತೀನಿ ಬಿಡರಿ—ಚಿವುಟಿ ರಗತ ಬರೋದರಾಗ! ಆದರ-ಅಂದರ-ಇವತ್ತ-ಥೆಂ(ಸಂ)ಜೆ ರೊಟ್ಟಿಗೆ ಜ್ಯಾ (ಜೋ)ಳ ಇಲ್ಲಂತರಿ—

**ಮುದುಕ**:—( ಬೇಜಾರದ ದನಿಯಲ್ಲಿ ) ತಕ್ಕೊಂಡು ಹೋಗೋ ನಮ್ಮಲ್ಲಿಯದು ಒಂದಿಷ್ಟು! ಯಾವಾಗಲೂ ಅದು ಇಲ್ಲ, ಇದು ಇಲ್ಲ—ಅಂತ!

**ಧರೆಪ್ಪ**:—ಇವತ್ತೇ ಕೊಡತಿದ್ದನಿರಿ..ಅಂದರೆ—ಹೋದ ವಾರದ

ಉದ್ಧರಿ ಕೊಡಬೇಕಾಗಿತ್ತರಿ—ಆದಕ್ಕ ನಿಮಗ ಇನ್ನೊಂದೆರಡು ದಿನ ಬಿಟ್ಟು ಕೊಟ್ಟರ ನಡೀತದೇನ್ರಿ ಬಡ್ಡಿ ಅಂತ—

**ಮುದುಕ**:— ( ಮೊದಲಿನಂತೆ ) ಆದಾಗ ಕೊಟ್ಟೀಯಂತೆ ಹೋಗೋ, ಪುಣ್ಯಾತ್ಮಾ! ಆಹ್ನಿಕ ಮುಗಿಸಬೇಕು ಅಂತ ನಾನು ಬಡೆದುಕೊಳ್ಳತೀನಿ—ಸುಮ್ಮಸುಮ್ಮನೆ ಸಣ್ಣಸಣ್ಣ ಮಾತಿಗಾಗಿ ಅಡ್ಡಿಮಾಡೋದು! ( ಎಂದು ಗುಣುಗುಟ್ಟುತ್ತ ಒಳಗೆ ಹೋಗುವನು).

**ಧರೆಪ್ಪ**:— ( ಅವನನ್ನು ನೋಡುತ್ತ ) ಖುಶೀನಳಗ ಇದ್ದರು ಅಂದರ ಅಣ್ಣಾ ಅವರು ಕುಬೇರನ ಅಣ್ಣಾ—ಅವರು! ( ಎಂದು ಸಂತೋಷದಿಂದ ತಲೆ ದೂಗುತ್ತ ಎಡಬಾಗಿಲಿನಿಂದ ಹೊರಗೆ ಹೋಗುವನು ).

[ ಒಂದೆರಡು ನಿಮಿಷಗಳ ತರುವಾಯ ಒಳಗಿನಿಂದ ಬಂದು— ]

**ಮುದುಕ**:— ಧರ್ಮ್ಯಾ—ಏ—ಧರ್ಮ್ಯಾ—

**ಅವ್ವ**:— ( ಬಂದು ) ಆಚಾರ್‍ರು ಬಂದರೇನು?

**ಮುದುಕ**:— 'ಧರ್ಮ್ಯಾ' ಅಂತ ನಾ ಒದರತೀನಿ— 'ಆಚಾರ್ಯರು ಬಂದರೇನೂ' ಅಂತ! ಆಚಾರ್ಯರ ಹೆಸರು ಧರ್ಮ್ಯಾ ಏನು?

**ಅವ್ವ**:— ಅಯ್ಯೊ ಒಂದು ಮಾತು ಕೇಳಬಾರದು, ಒಂದು ಮನೆಯೊಳಗ ತಿರುಗಾಡಬಾರದು! ಹೋಗತೀನಿ ಆಯಿತೆ? ನನಗೇನು ಗೊತ್ತು ಧರ್ಮ್ಯಾನ ಕೂಡ ನಿಮ್ಮದು ಇಷ್ಟೊಂದು ಏಕಾಂತದ ಮಾತು ಇದೆ ಅಂತ?

**ಮುದುಕ**:— ಏಕಾಂತ? ( ಒಮ್ಮೆಲೆ ನಗುತ್ತ ) ಹ ಹ! ಧರ್ಮ್ಯಾನ ಕರೆದು ಅವನ ಕತೆಯುಂದೇ ನಿನ್ನ ಮುಂದೆ ಹೇಳಿಸುವವ ಇದ್ದೆ..ಯಾವನೊ ಒಬ್ಬ ದಾಸಯ್ಯ—ತಂಬೂರಿ ಕಟ್ಟಿಕೊಂಡು ಬಂದಾನೆ—ಟಾಂಗಾದೊಳಗ ಹೊರಟಾನ—ದೇಶಾವರೀ ಜಾತಿ—ಎಲ್ಲರದೂ ಗುರುತು ಇದೆ ಅಂತ ತೋರಿಸಬೇಕಲ್ಲ?—ಎಲ್ಲಾರನೂ ಮಾತಾಡಿಸುವ ಹಾಗೆ ಈ ಶುಂಭನನ್ನೂ ಮಾತಾಡಿಸಿಯಾನೆ—'ನಿಮ್ಮ ಯಜಮಾನರು ಊರೊಳಗೆ ಇದ್ದಾರೇನೂ' ಅಂತ..ಅವ ಹೇಳುವವ, ನೀನು ಕೇಳುವಾಕೆ! ಇಬ್ಬರೂ ಬೃಹಸ್ಪತಿಯ ಬೆಳಕೆ! ಹ ಹ! ( ಎಂದು ನಗುತ್ತ ಒಳಗೆ ಹೋಗುವನು).

**ಅವ್ವ**:— ( ಚಕಿತಳಾಗಿ ಅವನನ್ನು ನೋಡಿ ) ಇವರಿಗೆ ಇಷ್ಟು ಉಲ್ಲಾಸ ತರೋ ದಾಸಯ್ಯ ಅದೆಂಥವನ!

[ ಎಂದು ವಿಚಾರ ಮಾಡುತ್ತಿರುವಾಗ—ಹೊರಗಿನಿಂದ ಧರೆಪ್ಪನು ಅತ್ಯಂತ ಉಬ್ಬಿನಿಂದ ಬಂದು ಮಾತನ್ನು ಪ್ರಾರಂಭಿಸುವನು.]

**ಧರೆಪ್ಪ**:— ನೆಪ್ಪಾ (ನೆನಪು) ಯಿತು ನೋಡಿರಿ. . ಮಂಚಾಸಾನಿರಿ, ಅಣ್ಣಾ. ಅಕೇ— ( ಎಂದು ಎದುರು ನೋಡಿ— ‘ಯಪ್’ ಎಂದು ಬಿಕ್ಕುವವನಂತೆ ಬಾಯನ್ನು ಮುಚ್ಚಿಕೊಳ್ಳುವನು ).

**ಅವ್ವ**:— ( ಸಂತಾಪದಿಂದ ) ಹೊಲ್ಯಾ ರಂಡೇಗಂಡ–ಯಾರು ಬೇಕಾದವರು ಇರಲಿ–ಬಂದರೆ ಕಾಲು ಮುರೀತೀನಿ ಅಂತ— (ಎನುತ್ತ ಅವನ ಕಡೆ ನಡೆಯುವಷ್ಟರಲ್ಲಿ ಅವನು ಹೊರಗೆ ಜಾರುವನು ).

[ ಇಷ್ಟರಲ್ಲಿ ಮುದುಕನು ಎದುರಿನ ಬಾಗಿಲಿನಲ್ಲಿ ಹಣಕಿಕ್ಕಿ ಮೆಲ್ಲನೆ ಅತ್ತಿತ್ತ ನೋಡುತ್ತಿರುವನು. ಹೆಂಡತಿಯು ತನ್ನನ್ನು ನೋಡಲು— ]

**ಮುದುಕ**:— ( ಏನೂ ಅರಿಯದವನಂತೆ ) ತಂದನೇನು ?

**ಅವ್ವ**. —( ತನ್ನ ರಭಸದಲ್ಲಿಯೆ ) ಬಂದರೆ ಕಾಲು ಮುರೀತೀನಿ ಅಂತ ಹೇಳೀನಿ.

**ಮುದುಕ**.— ( ಬೇಜಾರದ ದನಿಯಲ್ಲಿ ) ನಾ ಒಂದು ಕೇಳಿದರೆ ನೀ ಒಂದು ಹೇಳತೀಯಲ್ಲ? ನನ್ನ ಕನ್ನಡಕಕ್ಕೆ ಕಾಚು ಹಾಕಿಸಿಕೊಂಡು ಬರಲಿಕ್ಕೆ ಹೋಗ್ಯಾನೆ–ಅದನ್ನ ತಂದನೇನು–ಅಂದೆ.

**ಅವ್ವ**:— ಕಣ್ಮುಚ್ಚಿ ಪೂಜೆ ಮಾಡುವಾಗ ಕನ್ನಡಕ ಯಾಕೆ ಬೇಕೊ ? ಆಚಾರ್ರು ಬರೋದರೊಳಗೆ ಆಹ್ನಿಕ ಮುಗಿಸರಿ, ನಡೀರಿ; ಏನು ಹುಡುಗಾಟಿಕೆಯೊ ?

**ಮುದುಕ**:— ( ಗುಣುಗುಟ್ಟುತ್ತ ) ಈ ಧರ್ಯಾನ ಕೆಲಸ ಹೀಂಗೇ ! ಹೇಳಿದ್ದನ್ನ ಮಾಡದರೆ ಅವನಿಗೆ ಧರ್ಯಾ ಯಾಕೆ ಅನಬೇಕು ?

**ಅವ್ವ**:— ( ಕನಲಿ ) ಅಯ್ಯ—‘ಧರ್ಯಾ–ಧರ್ಯಾ’! ಅವನ ಹೆಸರಲೆ ಸಂಧ್ಯಾನ ಮಾಡತೀರೊ ಏನ್ಮಾಣ್ಣೊ? ಒಳಗೆ ನಡೀರಿ, ನನಗ ಹಾದಿ ಬಿಡರಿ—ಅಂದೆ ! ( ಮುದುಕನು ಮಾತನಾಡಬೇಕೆನುವಾಗ) ನಿಮ್ಮ ನೆರಳಿನೊಳಗ ಕಾಲಿಡಬಾರದು ! (ಎಂದು ಗಾಳಿಯ ವೇಗದಿಂದ ಅವನನ್ನು ದಾಟಿ ಹೋಗುವಳು.)

[ ಮುದುಕನು ಮತ್ತೊಮ್ಮೆ ಹೊರಬಾಗಿಲಿನ ಕಡೆ ನೋಡಿ ಒಳಗೆ ಹೋಗುವನು.]

[ ಮತ್ತೆ ಕೆಲಹೊತ್ತು ನಿಃಶಬ್ದತೆ ]

[ಇಷ್ಟರಲ್ಲಿ ಎಡದ ಬಾಗಿಲಿನಿಂದ ಪುಟ್ಟು ಮೆಲ್ಲಗೆ ಬಂದು, ತುದಿಗಾಲಿನಿಂದ ಎದುರಿನ ಬಾಗಿಲಿನ ವರೆಗೆ ನಡೆದು ಹೋಗಿ, ಒಳಗೆ ಹಣಿಕಿಕ್ಕಿ ನೋಡಿ, ಲಗುಬಗೆಯಿಂದ ಮತ್ತೆ ಎಡದ ಬಾಗಿಲಿಗೆ ಬಂದು, ಕೈಮಾಡಿ ಹೊರಗಿನವರನ್ನು ಕರೆಯುವನು. ಕೂಡಲೆ ವೆಂಕಪ್ಪ ಬರುವನು],

**ವೆಂಕಪ್ಪ:**— (ಪುಟ್ಟುವನ್ನು ತುಸು ದೂರ ಎಳೆದು ಮೆಲ್ಲಗೆ) ಅವನ ಪೆಟ್ಟಿಯೊಳಗಿನ ಜನಿವಾರದ ಮೇಲೆಯೆ ಕಣ್ಣಿಡಬೇಕು—ಆಂ?

**ಪುಟ್ಟು:**— (ಜಂಬದ ದನಿಯಲ್ಲಿ) ನಮ್ಮ ಕಯ್ಯೊಳಗೆ ಸಿಕ್ಕ್ಯಾನೆ ಈಗ—

**ವೆಂಕಪ್ಪ:**— (ನಡುವೆಯೆ ಬೇಜಾರದಿಂದ) ತಿಳಿಯೋದಿಲ್ಲವೊ ನಿನಗೆ ಏನೂ! ಈ ದಾಸಯ್ಯಗಳು ಅಂತಿಂಥವರು ಅಂತ ತಿಳಿಯಬೇಡ. ಎಂತೆಂಥ ದೆವ್ವ ಬಿಡಿಸತಾರಂತೆ! ಒಂದು ವೇಳೆ 'ನನಗೆ ತನ್ನ ಜನಿವಾರ ಬೇಕು, ಅದಕ್ಕೆ ನಾವು ಈ ಹಂಚಿಕೆ ಹೂಡೀವಿ' ಅನ್ನೋದರ ಸುಳುವು ಅವನಿಗೆ ಹತ್ತಿತು ಅಂತ ತಿಳಿ; ಒಡನೆ ದೆವ್ವನಿಗೆ ಹೇಳಿಬಿಡತಾನೆ 'ಎಲವೊ ಭೂತವೆ, ನನ್ನ ಯಜ್ಞೋಪವೀತವನ್ನು ಅಲ್ಲಿಯ ವರೆಗೆ ಮಾಯಮಾಡು' ಅಂತ! ಆಮೇಲೆ—? ಏನು ಮಾಡುವುದು? ಅವನ ತಂಬೂರಿ ಕಸಿದುಕೊಂಡು ತಲೆ ಗಟ್ಟಿಸಿಕೊಳ್ಳಬೇಕೆ?

**ಪುಟ್ಟು:**— (ಹಿರಿತನದಿಂದ ನಕ್ಕು) ಹುಚ್ಚಾ! ದೆವ್ವನಿಗೆ ಏನು ಹೇಳತಾನೆ! ಜನಿವಾರ ನೋಡಿದರೆ ಹೆದರಿ ಓಡುವ್ವನ—

**ವೆಂಕಪ್ಪ:**— (ನಡುವೆಯೆ ಹಟದಿಂದ) ಇದು ಸಾಕಿ ಸಾದ ಮಾಡಿದ ದೆವ್ವ ಇತ್ತಂದರೆ? (ಒಮ್ಮೆಲೆ ಹೊರಗೆ ಸದ್ದಾದನ್ನು ಕೇಳಿ) ಶಶ್—(ಎಂದು ಎಡದ ಬಾಗಿಲಿಗೆ ಹೋಗಿ ನೋಡಿ ಬಂದು, ತಲೆದೂಗುತ್ತ) ವಾಹವ್ವಾ, ದಾಸಯ್ಯ! ತಂಬಾಕ ತಿನ್ನೋದು, ನಸ್ಯ ಏರಿಸೋದು—ಎಲ್ಲ ಸಡಗರ ಒಂದೇ ಏಟಿನೊಳಗೆ ನಡೆಯಿಸಿ ಬಿಟ್ಟ್ಯಾನೆ! ಇನ್ನೊಂದು ಗಳಿಗೆಯೊಳಗೆ ಗಲ್ಲಗೇರಿಸತಾರೊ ಏನೊ ತನ್ನ ಅನ್ನೊಹಾಗೆ ಹೌಸುಗಳನ್ನೆಲ್ಲಾ ಮುಗಿಸಿಕೊಂಡೇ ಒಳಗೆ ಬರತಾನೆ ನೋಡು! ಏ—ಪುಟ್ಟ್ಯಾ—ಇಲ್ಲಿ ನೋಡು—ಆ ದಾಸಯ್ಯನ ಸ್ವಾಗತ ಮಾಡಿ ಕೂಡಿಸಿದ ಮೇಲೆ ನಾನು ಹೋಗಿ ಆ ಮಂಚದ ಮೇಲೆ ಕೂತುಕೋತೀನಿ, ಒಳಗನಿಂದ ಯಾರು ಬರತಾರೇನು ನೋಡತೀನಿ,

ಯಾರಾದರೂ ಬರುವ ಸಪ್ಪಳ ಆಯಿತು, ನಾನು ಕೇಳುತ್ತೇನೆ; ಕೇಳುತ್ತೇವು ದೊಂದೆ ತಡ, ನೀನು ದಾಸಯ್ಯನ ಹೊರಗೆ ನೂಕಿ ಬಿಡು—ಮತ್ತೆ ನೂಕುವಾಗ ತಾನಾಗಿಯೆ ಕಯ್ಯೊಳಗೆ ಸಿಕ್ಕಿತೊ ಏನೊ ಅನ್ನುವ ಹಾಗೆ ಜನಿವಾರ ಹಿಡಿದು ಜಗ್ಗಿಕೊಂಡು ಬಿಡು—ದಾಸಯ್ಯನ್ನ ಅಲ್ಲ ಮತ್ತೆ—ಜನಿವಾರ ಅಷ್ಟೆ ಜಗ್ಗಿಕೊಂಡು ಬಿಡು—ತಿಳಿಯಿತೆ?—(ಒಮ್ಮೆಲೆ ಎಡದ ಬಾಗಿಲಿಗೆ ನಡೆದು ಹೋಗಿ) ಬರಬೇಕು, ಬರಬೇಕು, ದಾಸಯ್ಯನವರೆ—

[ದಾಸಯ್ಯನು ಬರಿಮೈಯಿಂದ–ಧೋತರವನ್ನುಟ್ಟುಕೊಂಡು, ತಲೆಗೆ ಚಿಂದಿಯೊಂದನ್ನು ಸುತ್ತಿಕೊಂಡು ಕೈಯಲ್ಲಿ ತಂಬೂರಿಯನ್ನು ಹಿಡಿದುಕೊಂಡು ಬರುವನು. ಅವನ ಮೈಯೊಳಗೆ ಬಿಳಿದಾದ, ಉದ್ದವಾದ ಯಜ್ಞೋಪವೀತವಿದೆ; ಮುಖಚರ್ಯೆಯಲ್ಲಿ ಮಾತ್ರ ಬ್ರಾಹ್ಮಣ್ಯದ ಒಂದೂ ಲಕ್ಷಣವಿಲ್ಲ.]

**ವೆಂಕಪ್ಪ:**— ಕೂತುಕೊಳ್ಳಿರಿ, ಕೂತುಕೊಳ್ಳಿರಿ, ದಾಸಯ್ಯನವರೆ; (ದಾಸಯ್ಯನು ಎಡಬಾಗಿಲಿನ ಹತ್ತರ ತುಸು ಮುಂದೆ ಬಂದು ಕುಳಿತುಕೊಳ್ಳಲು) ಈಗ ನಮಗೆ ನಿಮ್ಮ ಹಾಡು ಕೇಳಬೇಕಾಗಿದೆ!

**ಪುಟ್ಟಿ:**— ಅದೇನು ಹೇಳುವುದು! ಇಲ್ಲಾ ಅಂದರೆ ಸುಮ್ಮಸುಮ್ಮನೆ ಕರೀತಿದ್ದೆವೆ?

[ದಾಸಯ್ಯನು ಕೆಲವು ಹೊತ್ತು ಒಮ್ಮೆ ವೆಂಕಪ್ಪನನ್ನು, ಒಮ್ಮೆ ಪುಟ್ಟಿಯನ್ನು ಅವರವರು ಮಾತನಾಡುವಾಗ ನೋಡುವನು.]

**ವೆಂಕಪ್ಪ:**— ನಿಮ್ಮ ಹಾಡು ಕೇಳುವುದು ಅಂದರೆ ಇಂದು ಕೇಳಿ ಇನ್ನೊಂದು ಗಳಿಗೆಗೆ ಮರೆಯಬೇಕು ಅನ್ನುವ ಉದ್ದೇಶದಿಂದಲ್ಲ.

**ಪುಟ್ಟಿ:**— ಮರೆಯುವುದೆ? 'ಮರೆಯಬೇಕು ಮತ್ತೆ ಕರೆಯಬೇಕು'!

**ವೆಂಕಪ್ಪ:**— ಈಗಾಗಲೆ ಒಮ್ಮೆ ಮರೆತಿದ್ದರ ಫಲ ಉಣ್ಣಬೇಕಾಗಿದೆ–

**ಪುಟ್ಟಿ:**— ಉಣ್ಣಬೇಕಾಗಿದೆ, ಆದರೆ ಊಟಕ್ಕೆ ಏಳಬೇಕೆಂದರೆ ಅಡ್ಡಿಯಾಗಿದೆ! (ವೆಂಕಪ್ಪನು ತನ್ನನ್ನು ಸಿಟ್ಟಿನಿಂದ ನೋಡಲು) ಅಂದರೆ ಯೋಗ್ಯತಾ ಇಲ್ಲ ಅಂತ—

**ವೆಂಕಪ್ಪ:**— (ಉಸಿರೆಳೆದು) ಯೋಗ್ಯತಾ! ಎಲ್ಲಿಂದ ಬರಬೇಕು? ಎಂದು ದಾಸರ ಹಾಡು ಹೋಯಿತೊ ಅಂದಿನಿಂದ ಎಲ್ಲಾ ಹೋಯಿತು, ಬಳೆದು ಹೋಯಿತು, ತೊಳೆದು ಹೋಯಿತು.

**ಪುಟ್ಟು**:— 'ತೊಳೆದು'—ಯಾಕೆ? ತೊಳೆದು— **ಕೊಂಡು** ಹೋಯಿತು—ಅನ್ನಿರಿ. ಈಗ ಮೇಲೆ ಒರಿಯು ನೀರು ಹರಿಯುತ್ತಿದೆ.

**ವೆಂಕಪ್ಪ**:— (ಎಳೆ ಸಿಕ್ಕಿತೆಂಬಂತೆ) ಹಾಂ—ಹಾಂ! ಈಗ ಆ ನೀರಿನೊಳಗೆ ನಾವು ಚಡಪಡಿಸತಾ ಇದ್ದೀವಿ. ಆದರೆ ಈಸಬೇಕು—

**ಪುಟ್ಟು**:— (ನಡುವೆಯೆ) ಈಸಲಿಕ್ಕೆ ಬರದಿದ್ದರೆ ಕಯ್ಯೊಳಗಿನ ಕುಂಬಳ ಸೊಟ್ಟೆಯು— (ವೆಂಕಪ್ಪನು ಸಿಟ್ಟಿನಿಂದ ನೋಡಲು ತಡೆಯುವನು).

**ವೆಂಕಪ್ಪ**:— (ಮುಂದುವರಿಸುತ್ತ) ಈಸಬೇಕು ಇದ್ದು ಜಯಿಸಬೇಕು—ಅನ್ನುವ ದಾಸರ ಆ ಕರ್ಣಾಟಕ ಸಂಸ್ಕೃತಿ ಬೇಕು, ಆ ಕನ್ನಡ ಸಾಹಿತ್ಯದ ಸಂದೇಶ ಬೇಕು.

[ಕೆಲಹೊತ್ತು ಇಬ್ಬರ ಮಾತೂ ತಡೆಯುವುದು. ಕೊನೆಗೆ ಅವರಿಬ್ಬರನ್ನೂ ತುಸು ಹೆದರಿಕೆಯಿಂದ ನೋಡುತ್ತ—]

**ದಾಸಯ್ಯ**:— ನಾನೇನೊ ಬಡವ ದಾಸಯ್ಯ. (ಮೇಲೆ ಕೈಮಾಡಿ) ಆ ಮಹಾನುಭಾವರ ಹೆಸರಿನಿಂದಲೆ ಒಂದೆರಡು ಹಾಡು ಒದರಿಕೊಂಡು ಹೊಟ್ಟೆ ತುಂಬಿಕೊಳ್ಳತೇನಿ. . . ತಮ್ಮ ಅನುಗ್ರಹ ಆಗುವಹಾಗಿದ್ದರೆ ಹೇಳತೇನಿ ಬೇಕಾದರೆ ಒಂದೆರಡು ಹಾಡು.

**ಪುಟ್ಟು**:— ಆಹಾ! ನೀವು ಹಾಡು ಹೇಳಬೇಕು ಅನ್ನುವದನ್ನೆ ನನ್ನ ಮಿತ್ರ ತಮಗೆ ಇದುವರೆಗೆ ಹೇಳಿಕೊಂಡದ್ದು.

**ದಾಸಯ್ಯ**:— ದಾವುದು ಹೇಳೋಣವಾಗಬೇಕು?

**ಪುಟ್ಟು**:— ಗಾವುದ—! ಅಂದರೆ ಬಹಳೊತ್ತು ಹಿಡಿಯುವುದೇನು ಅದನ್ನ—

**ವೆಂಕಪ್ಪ**:— (ನಡುವೆಯೆ) ಗಾವುದ ಅಲ್ಲೊ? (ದಾಸಯ್ಯನಿಗೆ) ನೋಡಿದಿರಿಲ್ಲೊ? ಸಂಸ್ಕೃತ ಕನ್ನಡ ಕೂಡ ಮರೆತು ಹೋಗಿದೆ ಈಗಿನ ಜನರಿಗೆ. (ಕೈಮುಗಿದು) ದಾವುದು ಹೇಳೋಣವಾಗುವುದೊ ತಾವುದು ಕೇಳೋಣವಾಗುವುದು. ಬೇಕಾವುದನ್ನು ಹೇಳೋಣವಾಗಲಿ.

**ದಾಸಯ್ಯ**:— (ನಮ್ರತೆಯ ದನಿಯಲ್ಲಿ) ಸಂಗೀತದ ಮಟ್ಟಿಗೆ—

**ಪುಟ್ಟು**:— (ನಡುವೆಯೆ) ನಾವೂ ಅಷ್ಟರಮಟ್ಟಿಗೆ. . ಇಲ್ಲಾ ಅಂದರೆ,

ಲಾವಣಿ ಧಾಟಿಯ ಹಾಡು ಯಾವುದಾದರೂ—ಅಂದರೆ ದಾವುದಾದರೂ ಇದೆ ಏನು?

**ದಾಸಯ್ಯ:**— ಬೇಕಾದಷ್ಟು ಇವೆ. . ಆ ಮಹಾನುಭಾವರ ಕೃತಿಗಳಲ್ಲಿ ಇಂತಹದು ಇಲ್ಲ ಅಂತ ಇಲ್ಲ. . ಸಂಸಾರವನ್ನು ನೀಗಿದವರು ಅವರು; ಷಡ್ರಿಪುಗಳನ್ನು ಜಯಿಸಿದವರು; 'ಮನವೆಂಬ ಮರ್ಕಟವ' ಮುಷ್ಟಿಯಲ್ಲಿ ಬಿಗಿದಿಟ್ಟವರು.

**ಪುಟ್ಟು:**— (ನಡುವೆಯೆ) ಅಂದರೂ ಇಷ್ಟು ಹಾಡುಗಳನ್ನು ಬರೆದರಲ್ಲ! (ವೆಂಕಪ್ಪನು ನೋಡಲು) ಅದಕ್ಕೆ ಅವರು ಮಹಾನುಭಾವರು ಅನ್ನೋದು.

**ವೆಂಕಪ್ಪ:**—ಅದಕ್ಕಂತಲೆ ಅವರ ತತ್ತ್ವಗಳನ್ನು ತಿಳಿದುಕೊಳ್ಳಬೇಕೆಂಬ ಹಟ ನಮಗೆ. (ದಾಸಯ್ಯನಿಗೆ) ದಾವುದರಲ್ಲಿ ಅವರ ತತ್ತ್ವ ಅಡಕವಾಗಿದೆ ಅದಾವುದನ್ನು ಹಾಡೋಣವಾಗಲಿ.

**ದಾಸಯ್ಯ:**— ಮಧ್ಯಾಹ್ನದ ಹೊತ್ತು ಏರುತಾ ಬಂದಿತು. ತಮ್ಮ ಅನುಗ್ರಹ ಏನಾದರೂ ಆದರೆ—

**ಪುಟ್ಟು:**— (ತನ್ನಷ್ಟಕ್ಕೆ ಎಂಬಂತೆ) ಅನ್ನಗ್ರಹದ ಹೊತ್ತಾಗಿದೆ—ಅದೇನು ಸುಳ್ಳಲ್ಲ—

**ದಾಸಯ್ಯ:**— ಏನೊ ಕಾಸೆರಡು ಕಾಸು ದಾನ ಮಾಡುವ ಇಚ್ಛೆ ಇದ್ದರೆ—. ಮನೆಯೊಳಗೆ ಮಕ್ಕಳ ಉಪನಯನ ಮಾಡಬೇಕಾಗಿದೆ.

**ವೆಂಕಪ್ಪ.**— ಅದಕ್ಕೇ ಒಂದು ಹಾಡು ಹೇಳಿರಿ ಅನ್ನೋದು.

**ಪುಟ್ಟು:**— ಲಾವಣಿ ಧಾಟಿಯದು.

**ದಾಸಯ್ಯ:**— (ಅಸಮಾಧಾನದಿಂದ) ಆಗಬಹುದು. 'ಗುರುವಿನ ಗುಲಾಮ—'

**ವೆಂಕಪ್ಪ:**— (ಒಮ್ಮೆಲೆ ಅವನ ಬಾಯಿಯ ಮೇಲೆ ಕೈಯಿಟ್ಟು) ಇಲ್ಲಿ ಎಲ್ಲರೂ ಗುರುವಿನ ಗುಲಾಮರೆ ಇದ್ದೀವಿ. ಒಳಗೆ ಕೂತಾರೆ ಗುರುಗಳು. ನಿಮ್ಮ ದನಿ ಕೇಳಿಸಿತು ಅಂದರೆ—ಆಯಿತು—ಯಾರಿಗೂ ಅನುಗ್ರಹ ಆಗುವಹಾಗಿಲ್ಲ. ಒಂದಿಷ್ಟು ಹಗುರಾಗಿ ಮೆತ್ತಗಾಗಿ ಹೇಳೋಣವಾಗಬೇಕು. ನೀವೇನೊ ಜಗತ್ತಿಗೆಯೆ ತತ್ತ್ವೋಪದೇಶ ಮಾಡಬೇಕು ಅನ್ನುವ

ಸದಿಚ್ಛೆಯಿಂದ ಅಷ್ಟು ಗಟ್ಟಿಯಾಗಿ ಹೇಳತಾ ಇದ್ದೀರಿ; ಆದರೂ—ಮಧ್ಯಾಹ್ನದ ಹೊತ್ತು-ಒಂದಿಷ್ಟು—

**ದಾಸಯ್ಯ:**— ತಮ್ಮ ಅನುಗ್ರಹ ಹೇಗಾಗುವುದೊ ಹಾಗೆ—
( ವೆಂಕಪ್ಪನು ತಲೆದೂಗಿ ಪುಟ್ಟುವಿಗೆ ಸನ್ನೆಯಿಂದ ತಿಳುಹಿಸಿ ನಡೆದು ಮಂಚದ ಮೇಲೆ ಕುಳಿತುಕೊಳ್ಳುವನು).

**ದಾಸಯ್ಯ:**— ( ಮೆಲುದನಿಯಲ್ಲಿ ಕೆಳಗಿನ ನುಡಿಯನ್ನು ಹೇಳುವನು. ವೆಂಕಪ್ಪನು ಆಗಾಗ ಎದುರಿನ ಬಾಗಿಲಿನೊಳಗೆ ನೋಡುತ್ತ ತಲೆದೂಗುತ್ತಿರುವನು. ಪುಟ್ಟು ಮೇಲಿಂದ ಮೇಲೆ ವೆಂಕಪ್ಪನನ್ನು ನೋಡುತ್ತ ತಲೆದೂಗುವನು ).

**'ಗುರುವಿನ ಗುಲಾಮನಾಗೋತನಕ ದೊರೆಯದಣ್ಣ ಮುಕುತಿ ।**
**ಪರಿಪರಿ ಅನೇಕ ಶಾಸ್ತ್ರವ ಓದಿ ವ್ಯರ್ಥವಾಯಿತೊ ಭಕುತಿ ॥ ಪ ॥**
**ಕೊರಳೊಳು ದಾರ ಧರಿಸಿದರಲ್ಲ ।**

[ ವೆಂಕಪ್ಪನು ಚಕಿತನಾಗಿ ಬಾಯ್ದೆರೆದು ನೋಡುವಾಗ ಅವನು ಕೆಮ್ಮುವನೆಂದು ಪುಟ್ಟು ತೋಳು ಏರಿಸುತ್ತ ಸಜ್ಜಾಗಲು ದಾಸಯ್ಯನು ಚಕಿತನಾಗಿ ತಡೆಯುವನು ]

**ವೆಂಕಪ್ಪ:**— ( ಬಾಯ್ದೆರೆಯುತ್ತ ) ಆಹಾ ! ಆಹಾ ! ಆನಂದ !

**ಪುಟ್ಟು:**— ( ತೋಳುಗಳನ್ನೆರಿಸುತ್ತ ) ನನಗಂತೂ ರೋಮಾಂಚವೇಳು ವುದು ( ಎಂದು ಎರಡೂ ರಟ್ಟೆಗಳನ್ನು ಬಲವಾಗಿ ತಿಕ್ಕಿಕೊಳ್ಳುವನು ).

**ದಾಸಯ್ಯ:**— ( ಅಷ್ಟಕ್ಕೆ ಸಮಾಧಾನಹೊಂದಿ ಮುಂದುವರಿಸುವನು. )

**'ಕೊರಳೊಳು ದಾರ ಧರಿಸಿದರಲ್ಲ**
**ಬೆರಳೊಳು ಜಪಮಣಿ ಎಣಿಸಿದರಲ್ಲ ।**

**ಮರುಳನಾಗುತಾ ಶರೀರಕೆ ಬೂದಿ**
**ಒರೆಸಿಕೊಂಡು ತಾನು ತಿರುಗಿದರಲ್ಲ ॥ ಗುರುವಿನ ಗುಲಾಮ ॥ ೧ ॥'**

**ವೆಂಕಪ್ಪ:**— ( ದಾಸಯ್ಯನು ತಡೆಯಲು ) ಕೇಳಿದೆಯಾ, ಪುಟ್ಟೂ ? 'ಕೊ-ರ-ಳೊ-ಳು-ದಾ-ರ' ಆಹಾ ! ಎಂತಹ ಮಾರ್ಮಿಕವಾದ ಶಬ್ದ ಯೋಜನೆ ! ಕೊರಳೊಳು **ಉದಾರ**. ಮಾತಿನೊಳಗೂ ಉದಾರ ಇರ ಬೇಕು ಅಂತ—

**ದಾಸಯ್ಯ**:— ಅಲ್ಲ – ಮಹಾಸ್ವಾಮೀ — 'ಕೊರಳೊಳು ದಾರ' ಅಂತ ಯಜ್ಞೋಪವೀತಕ್ಕಾಗಿ ಅವರು ಹೇಳುವುದು.

**ವೆಂಕಪ್ಪ**:— (ಆಶ್ಚರ್ಯತೋರಿಸಿ) ಯಜ್ಞೋಪವೀತಕ್ಕಾಗಿ? ಅಂದರೆ– ನೀವು ಹಾಕಿಕೊಂಡಿರುವಿರಿ ಆ ಜನಿವಾರ? ಅದನ್ನ 'ಧರಿಸಿದರಲ್ಲ' ಅಂದರೆ ಹಾಕಿಕೊಳ್ಳ **ಬಾರದು** ಅಂತ ಹೇಳತಾರೂ ಏನೊ ಮತ್ತೆ?

**ದಾಸಯ್ಯ**:— ಹಾಗಲ್ಲ. ಅಧ್ಯಯನ–ಅಧ್ಯಾಪನ–ಯಜನ–ಯಾಜನ–ದಾನ–ಪ್ರತಿಗ್ರಹ ಮೊದಲಾಗಿ ಬ್ರಾಹ್ಮಣ್ಯ 'ಸರ್ವಸ್ಯ ಚಾಹಂ ಹೃದಿ ಸಂನಿವಿಷ್ಟಃ' ಎನ್ನೋ ಹಾಗೆ ಒಳಗೆ ಇರತಕ್ಕದ್ದು **ವಿನಹ** ಹೊರಗೆ ಅಲ್ಲ ಅಂತ—

**ಪುಟ್ಟು**: (ವೆಂಕಪ್ಪನಿಗೆ) ತಿಳಿಯಿತೇನು? ಒಳಗೆ ಆ ಬ್ರಾಹ್ಮಣ್ಯ ಇದ್ದಿದ್ದಿಲ್ಲ ಅಂದರೆ ಹೊರಗೆ ಈ ಯಜ್ಞೋಪವೀತ ಇರಬೇಕು ಅಂತ—

**ದಾಸಯ್ಯ**:— (ಒಮ್ಮೆಲೆ) ಹಾಗಲ್ಲ – ಹಾಗಲ್ಲ, ಸ್ವಾಮೀ. ಒಳಗೆ ಇರೋದು ಮುಖ್ಯ—ಹೊರಗಿನ ಈ ಚಿಹ್ನ ಇದ್ದರೂ ಅಷ್ಟೆ, ಬಿಟ್ಟರೂ ಅಷ್ಟೆ ಅಂತ.

**ವೆಂಕಪ್ಪ**:— (ತಿಳಿದುಕೊಂಡವನಂತೆ) ಹೀಗೊ? ಅಂದರೆ – ತಮ್ಮಂಥವರಿಗೆ ಮೈಮೇಲೆ ಜನಿವಾರ ಇದ್ದರೂ ಅಷ್ಟೆ ಬಿಟ್ಟರೂ ಅಷ್ಟೆ ಅಂತ.

**ದಾಸಯ್ಯ**:— (ಸ್ತುತಿಯಿಂದ ಉಬ್ಬಿದರೂ ಅದನ್ನು ತೋರಿಸಬಾರದೆಂದು) ನಾನೇನು, ಸ್ವಾಮೀ? ನಾನು, ಎಷ್ಟರವ? 'ಅನಂತ ಅಪರಾಧ ಎನ್ನಲ್ಲೇ ಇರಲಾಗಿ'

**ವೆಂಕಪ್ಪ**:— (ಅದರ ಭಾವವನ್ನು ಸೂಚಿಸುತ್ತ) ಛೆ.. ಛೆ – ಅದು ಹೇಗಾದೀತು? ತಮ್ಮಂಥವರ ದರ್ಶನದಿಂದ ನಮ್ಮ ಎಲ್ಲ ಸಂಕಟಗಳೂ ಅದೇಕೆ? ಅದಾವ ಸಂಕಟಗಳೂ ಹಾರಿ ಹೋದುವು ಎನಬಹುದು. ಸಾಕು, ದಾಸಯ್ಯನವರೆ, ಹೆಚ್ಚಿಗೆ ತಮಗೆ ಆದರೂ ಯಾಕೆ? ಈಗ ಹೇಳಿದ ಅದೊಂದೆ ನುಡಿಯನ್ನು ಇನ್ನೊಮ್ಮೆ ಹೇಳಿಬಿಡಿರಿ–ಸಾಕು. ಪ್ರಪಂಚದ ಎಲ್ಲಾ ತೊಡಕುಗಳನ್ನು ಬಿಡಿಸುವ ಗುಟ್ಟು ಅದರಲ್ಲಿದೆ ಎನಬಹುದು.

**ದಾಸಯ್ಯ**:— (ನಿರುಪಾಯವೆಂದು) 'ಗುರುವಿನ ಗುಲಾಮನಾಗೋ ತನಕ'

[ಎಂದು ಮರೆತು ಗಟ್ಟಿಯಾಗಿಯೆ ಪ್ರಾರಂಭಿಸುವನು. ಅರೆನಿಮಿಷದಲ್ಲಿ ವೆಂಕಪ್ಪನು ಹೃದಯವನ್ನೆ ಕಾರುವಂತೆ ಕೆಮ್ಮುವನು. ದಾಸಯ್ಯನು 'ಏನಿದು' ಎಂದು ಎದ್ದು ನಿಲ್ಲುವದೊಂದೆ ತಡ ಪುಟ್ಟು ಅವನನ್ನು ಹೊರನೂಕಲು ಯತ್ನಿಸುವನು; ಆಗ ತನ ಕೈಯನ್ನು ಅವನ ಜನಿವಾರ ತೊಡಕಾಗಿ ಸಿಕ್ಕಿಸಿಕೊಳ್ಳುವನು. ದಾಸಯ್ಯ 'ಬಿಡಿ, ಸ್ವಾಮಿ; ಬಿಡಿ, ಸ್ವಾಮಿ' ಎನ್ನುವಾಗ ಪುಟ್ಟು ಅವನನ್ನು ಬಾಗಿಲ ಹೊರಕ್ಕೆ ಅಟ್ಟಿ ಕೈಯಲ್ಲಿ ಜನಿವಾರವನ್ನು ಮುಚ್ಚಿಕೊಳ್ಳುವನು. ಇಷ್ಟರಲ್ಲಿ ಎದುರಿನ ಬಾಗಿಲಿಂದ ಮುದುಕನು ಅರ್ಭಟಿಸುತ್ತ ಬರುವನು].

**ಮುದುಕ**:— ಏನು–ಏನು–ಏನಿದು ಗಲಾಟೆ? (ಎಂದು ಪುಟ್ಟುವನ್ನು ಗದ್ದರಿಸುವನು. ವೆಂಕಪ್ಪನು ಅಷ್ಟರಲ್ಲಿ ಕೆಮ್ಮುವುದನ್ನು ತಡೆದದ್ದರಿಂದ ಅವನು ಅಲ್ಲಿ ಕೂತದ್ದು ಮುದುಕನ ಲಕ್ಷ್ಯಕ್ಕೆ ಬಂದಿಲ್ಲ.)

**ಪುಟ್ಟು**:— (ಸಿಡುಕಿನ ದನಿಯಲ್ಲಿ) ಯಾವನೊ ದಾಸ ಅಂತೆ! ಮಧ್ಯಾಹ್ನ ದೊಳಗೆ ಕಿರಚಲಿಕ್ಕೆ ಪ್ರಾರಂಭ ಮಾಡಿದ—

**ಮುದುಕ**:— ದಾಸ? ಯಾರು?

**ದಾಸಯ್ಯ**:— (ಬಂದು) ನಾನೇ–ಸ್ವಾಮಿ. . ತಾವಾಗಿಯೆ ನನ್ನನ್ನು ಕರೆದುಕೊಂಡು ಬಂದು—ಈಗ ನೂಕಿಬಿಡತಾರ! ಬಡವ ಅಂತ—ಬೇಕಾ ದ್ಮಾಡಿದರೆ? ನೂಕುವಾಗ ನನ್ನ ಯಜ್ಞೋಪವೀತ ಹರಿದು ಬಿದ್ದಿತು. (ಅತ್ತಿತ್ತ ನೋಡುತ್ತ ಪುಟ್ಟು ಮುಷ್ಟಿಯನ್ನು ಮುಚ್ಚುವದನ್ನು ಕಂಡು) ಅದೊ— ನಿಮ್ಮ ಕೈಯಲ್ಲಿದೆ!

**ಮುದುಕ**:— (ಮಗನಿಗೆ) ಏನೊ ಇದು? ಕೊಟ್ಟುಬಿಡು ಅದನ್ನ! (ಪುಟ್ಟು ನಿರುಪಾಯನಾಗಿ ಕೊಡುವನು) ಮಧ್ಯಾಹ್ನದ ಹೊತ್ತಿನೊಳಗೆ—

**ದಾಸಯ್ಯ**:— (ನಡುವೆಯೆ) ತಾವಾಗಿಯೆ ಕರೆದುಕೊಂಡು ಬಂದರು– [ಎಂದು ವೆಂಕಪ್ಪನನ್ನು ನೋಡುವಾಗ ವೆಂಕಪ್ಪನು ಮೆಲ್ಲಗೆ ಎದ್ದು ಹಲ್ಲುಕಚ್ಚಿ, ಮುಷ್ಟಿ ಮುಚ್ಚಿ ಆ ದಾಸಯ್ಯನನ್ನು ಹೆದರಿಸುತ್ತಿರುವನು. ಇಷ್ಟರಲ್ಲಿ ದಾಸಯ್ಯನ ದೃಷ್ಟಿಪಥವನ್ನನುಸರಿಸಿ ಒಮ್ಮೆಲೆ ಮುದುಕನೂ ವೆಂಕಪ್ಪನನ್ನು ನೋಡುವನು.

ಕೂಡಲೆ ವೆಂಕಪ್ಪನು ಅದೇ ಸ್ಥಿತಿಯಲ್ಲಿ 'ಹು ಹು ಹು' ಎಂದು ನಡುಗಲು ಪ್ರಾರಂಭಿಸುವನು. ಮುದುಕನಿಗೆ ಏನೂ ತಿಳಿಯುವುದಿಲ್ಲ. ಪುಟ್ಟು ಒಮ್ಮೆಲೆ ಓಡಿ ಬಂದು ವೆಂಕಪ್ಪನನ್ನು ಹಿಡಿಯುತ್ತ ]

**ಪುಟ್ಟು**:— ( ಗಾಬರಿಯನ್ನು ತೋರಿಸುತ್ತ) ಆಚಾರ್ಯರ–ಆಚಾರ್ಯರ– ಏನಾಯಿತು ? ( ಎನ್ನುತ್ತ ಅವನನ್ನು ಹಾಗೆಯೆ ಮಂಚದ ಮೇಲೆ ಕೂಡ್ರಿಸುವನು).

**ವೆಂಕಪ್ಪ**:— ( ಮೆತ್ತಗಿನ ದನಿಯಲ್ಲಿ) ನನಗೆ—( ತೇಕುತ್ತ) ನನಗೆ—ಚಳಿ ಜ್ವರ—ಬರುವ ಲಕ್ಷಣವಿದೆ. ( ಎಂದು ಒಮ್ಮೆಲೆ 'ತಲೆ–ಗಾಲು' ಹೊದ್ದು ಕೊಂಡು ಮಲಗುವನು.)

ತೆರೆ

## 'ಸಾಯಂ' ಎಂಬ ಮೂರನೆಯ ಅಂಕ

[ ಮೊದಲನೆಯ ಅಂಕದಲ್ಲಿ ತೋರಿಸಿದ ಕೋಣೆ. ಎಲ್ಲವೂ ಆಗ ತೋರಿಸಿದಂತೆಯೆ; ಮೇಜಿನ ಮೇಲಿದ್ದ ಗಡಿಯಾರವು ಮಾತ್ರ ಈಗ ಇಲ್ಲ. ಸಮಯ ಸಾಯಂಕಾಲ ಆರು ಗಂಟೆಯ ಸುಮಾರು. ಕೋಣೆಯಲ್ಲಿ ಯಾರೂ ಇಲ್ಲ ಎನುವಷ್ಟರಲ್ಲಿ ಒಳಗಿನಿಂದ ( ಎಂದರೆ ಪ್ರೇಕ್ಷಕರ ಬಲಬದಿಯ ಬಾಗಿಲಿನಿಂದ ) ಮುದುಕನು ಬರುವನು. ಮೈತುಂಬ ಚೊಕ್ಕಟವಾದ ಕೋಟು, ತಲೆಗೆ ಶೀಡಿ ಸುತ್ತಿಕೊಂಡ ರುಮಾಲು, ಕೈಯಲ್ಲಿ ಬಡಿಗೆ, ಮೈಮೇಲೆ ಅಂಗೈಯಗಲ ಮಡಿಕೆ ಹಾಕಿದ ಜರದಂತೆ ಕಾಣುವ ಅಂಚಿನ ದೋತರ; ಉಡುಪಿನಷ್ಟೆ ಓರಣವಾಗಿರುವ ಹೆಜ್ಜೆಗಳಿಂದ ( ಪ್ರೇಕ್ಷಕರ ಎಡಬದಿಯ ಬಾಗಿಲಿನಿಂದ ) ಹೊರಗೆ ಹೊರಟಿದ್ದಾನೆ. ಅಷ್ಟರಲ್ಲಿ ಒಳಗಿನಿಂದ ಬಂದು ]

**ಅವ್ವ**:— ಸಂಧ್ಯಾನದ ತಯಾರೀ ಮಾಡಿಟ್ಟೀನಿ ( ಮುದುಕನು ನಿಂತಲ್ಲಿಯೆ ತಡೆಯುವನು. ತಿರುಗಿ ನೋಡುವುದೂ ಇಲ್ಲ, ಮಾತನಾಡುವುದೂ ಇಲ್ಲ; ಅದಕಾಗಿ ತುಸು ಗಟ್ಟಿಯಾಗಿ ) ಸಂಧ್ಯಾನದ ತಯಾರಿ ಮಾಡಿ ಇಟ್ಟೀನಿ—ಅಂದೆ.

**ಮುದುಕ**:— ( ನಿಂತಲ್ಲಿಯೆ ಮುಖ ತಿರುಗಿಸಿ ನೋಡುತ್ತ ) ಸಂಧ್ಯಾವಂದನದ ತಯಾರಿಯೊಳಗೆ ಇರುವೆನೆ ನಾನು ? ಹೊರಗೆ ಹೊರಟೀನಿ; ಕಾಣಿಸೋದಿಲ್ಲವೆ ?

**ಅವ್ವ**:— ನನಗೇನು ಗೊತ್ತು, ನೀವು ಎಂದಿಲ್ಲದ ಇಂದು ಹೊರಗ ಹೋಗತೀರಿ ಅಂತ? ದಿನದ ಹಾಂಗ ನಾನು ಎಲ್ಲಾ ತಯಾರಿ ಮಾಡಿಟ್ಟ್ಯ, ಹೇಳಲಿಕ್ಕೆ ಅಂತ ಬಂದೀನಿ.

**ಮುದುಕ**:— ( ವೈರಾಗ್ಯದ ದನಿಯಲ್ಲಿ ) ನೀವು ಮಾಡೋದೂ ಬೇಡ; ಹೇಳೋದೂ ಬೇಡ. ಈ ಮನೆ, ಈ ಸಂಸಾರ ಸಾಕಾಗಿ ಹೋಯಿತು ನನಗೆ!

**ಅವ್ವ**:— ( ಆಶ್ಚರ್ಯ ತೋರಿಸಿ ) 'ಈ ಮನೆ, ಈ ಸಂಸಾರ ಸಾಕಾಗಿ ಹೋಗೇದ' ಅಂದರೆ? ಇನ್ನು ಮುಪ್ಪಿನೊಳಗ ಹೊಸ ಮನೆ, ಹೊಸ ಸಂಸಾರ ಹೂಡೋದದನೊ ಏನು ನಿಮ್ಮ ವಿಚಾರ ?

**ಮುದುಕ**:— ( ಹುಬ್ಬುಗಂಟಿಕ್ಕಿ ) ಹೊಸ ಸಂಸಾರ ಹೂಡೋದಿದೆ ಅಂತ ಯಾರು ಹೇಳಿದರು ?

**ಅವ್ವ**:— ಅಂದರ ದಿನಧಾಂಗ ಸಂಧ್ಯಾನ ಮಾಡೋದು ಬಿಟ್ಟು ಮದಿ(ವೆ)ಮಗನ ಹಾಂಗ ಸಡಗರ ಮಾಡಿಕೊಂಡು ಹೊರಗ ಹೊರಟೀರಿ–ಅದಕ್ಕ ಹೇಳಿದೆ.

**ಮುದುಕ**:— (ಬೇಜಾರದಿಂದ) ಪುಣ್ಯಾತ್ಮಳೆ, ಒಮ್ಮೆ ಮದಿ(ವೆ) ಮಗ ಆಗಿ ಸಾಕು–ಸಾಕಾಗಿ ಹೋಗಿದೆ! 'ದೇವರೆ, ಎಷ್ಟು ಜನ್ಮ ನನಗೆ ಕೊಟ್ಟರೂ ಬಾಲಸಂನ್ಯಾಸಿ ಆಗಿ ಹುಟ್ಟಿಸು ನನ್ನ' ಅಂತ ಬೇಡಿಕೊಳ್ಳ ಬೇಕಾಗಿದೆ! (ಹೊರಡಬೇಕೆನ್ನುತ್ತ ತನ್ನಷ್ಟಕ್ಕೆ) ಮದಿಮಗನೂ ಬೇಡ! ಮದ ವೀನೂ ಬೇಡ!

**ಅವ್ವ**:— (ಕಳವಳವನ್ನು ತಡೆಯುತ್ತ) ಇಂಥಾ ಪರಿಯಿಂದ ನಡೆಯೋದ ಕಿಂತ ಮದಿವೆ ಮಾಡಿಕೊಳ್ಳೋದು ಸಾವಿರಪಾಲಿಗೆ ಬೇಕು. ನನ್ನದೆ ತಪ್ಪು ಆಯಿತು; ಆವಾಗೇ ನಾನು ಹೇಳಬೇಕಂದರ ಅಷ್ಟು ಧೈರ್ಯನೂ ಇರ ಲಿಲ್ಲ, ಬುದ್ಧಿನೂ ಬರಲಿಲ್ಲ. (ಮುದುಕನು ದಿಟ್ಟಿಸಿ ನೋಡುತ್ತಿರಲು) ಅದಕೇ ಹುಚ್ಚಿಯಹಾಂಗ 'ಮನೀಗೆ ಬಂದರೆ ಕಾಲು ಮುರೀತೀನಿ' ಅಂದೆ, 'ಮನೀ **ಬಿಟ್ಟು ಹೋದರೆ** ಕಾಲು ಮುರೀತೀನಿ' ಅನಬೇಕಾಗಿತ್ತೊ ಏನೊ?

**ಮುದುಕ**:— (ಮೊದಲು ಚಕಿತನಾಗಿ, ಆ ಮೇಲೆ ಅಪಮಾನಿತನಾಗಿ, ಒಂದೆರಡು ಹೆಜ್ಜೆ ಮುಂದೆ ಬಂದು) ಯಾಕೆ? ಮುದುಕೆ ಆದ ಹಾಗೆ ತಲೆ ಮೇಲಿನ ಕೂದಲ–ಬದಲು ನಾಲಗೆ ಉದ್ದ ಆಗ ಹತ್ತಿತೇನು ನಿನ್ನದು?

**ಅವ್ವ**:— (ಕಂಠ ತುಂಬಿ ತನ್ನಷ್ಟಕ್ಕೆ ಎಂಬಂತೆ) ಹೆಂಗಸಿನ ಜಲಮಾನೆ ವ್ಯರ್ಥ! ಸಂಸಾರದೊಳಗ ಸಣ್ಣಾಕೆ ಇದ್ದಾಗ ಮಾತಾಡಬೇಕೆಂದರ ನಾಚಿಕೆಯಿಂದ ಧೈರ್ಯ ಆಗೋದಿಲ್ಲ, ಮುದುಕೆ ಆದ ಮ್ಯಾಲೆ ನಾಚಿಕೆ ಬಿಟ್ಟು ಮಾತಾಡಿದರ ಮನೆಯವರು ಕೂಡಾ ಕೇಳೋದಿಲ್ಲ! ಗಂಡಸಿನ ಮಾತು ಬೇರೆ; 'ಬೇಡ' ಅನಿಸಿತು ಅಂದರ ಮನೆಬಿಟ್ಟು ನಡೆದರಾಯಿತು–

**ಮುದುಕ**:— ಏ, ಬುದ್ಧಿಗೇಡೀ, 'ಮನೆಬಿಟ್ಟು ನಡೆದರಾಯಿತು'–ಅನ್ನಲಿಕ್ಕೆ ನಿಮ್ಮನ್ನೆಲ್ಲ ಸಂಸಾರಸಾಗರದೊಳಗೆ ಮುಳುಗಿಸಿ ನಾನೊಬ್ಬನೆ ಓಡಿಹೋಗತೀನಿ ಅಂತ ತಿಳಿದೆಯೊ ಏನು? ಈ ಹಾಳು ಮನೆಯೊಳಗೆ

ಬಂದಿಷ್ಟು ಸಂಧ್ಯಾವಂದನಕ್ಕೂ ಶಾಂತಿ ಸಿಗೋದಿಲ್ಲ ಅಂತ ಗುಡಿಗೆ ಹೊರಟೇನಿ–**ಗುಡಿಗೆ!** ಅಷ್ಟು ಕೂಡಾ ಸಹನ ಆಗೋದಿಲ್ಲವಲ್ಲ ನಿಮಗೆ?

**ಅವ್ವ**:— (ಸಿಡುಕಿನಿಂದ) ಗುಡಿಗೆ ಹೋಗಿರಿ, ಗೂಡಿಗೆ ಹೋಗಿರಿ! ನನಗೇನು ಮಾಡುವುದು? ನನ್ನಷ್ಟಕ್ಕೆ ನಾನು ನಾಳಿನ ನೆನಪು ಮಾಡಿ ಕೊಟ್ಟುಬಿಡತೀನಿ; ಉಳಿದ ವ್ಯವಸ್ಥಾ—

**ಮುದುಕ**:— 'ವ್ಯವಸ್ಥಾ—ವ್ಯವಸ್ಥಾ' ಅನ್ನಲಿಕ್ಕೆ ಯಾರೇನು ಸಾಯಬೇಕಾಗಿದೆ? ನಮ್ಮೊಬ್ಬರಲ್ಲಿಯೆ ಅವಿಧವಾನವಮಿಯೆ? ಇದೇ ಮೊದಲನೆಯ ವರ್ಷವೆ? ಪುಟ್ಯಾಗೆ ಹೇಳಿಬಿಡು–ಸಂಜೆಯ ಊಟ ಮಾಡಬೇಡ—ಅಂತ. . ಏನಿಲ್ಲ–ಕಡೆಗೆ ಬೆಳೆದ ಮಗ ಶ್ರಾದ್ಧ–ಅವಿಧವಾನವಮಿ ಆದರೂ ಮಾಡಿ ತಂದೆಗೆ ಸಹಾಯಮಾಡತಾನ ಅಂದು ಕೊಳ್ಳೋಣ. . ಅದಕ್ಕ ನಾಳೆ ಅವನೇ ಮಾಡಬೇಕು ಅಂತ ಹೇಳು.

**ಅವ್ವ**:— ಮತ್ತೂ ನನಗೇ ಹೇಳಿರಿ! ನನ್ನ ಮಾತು ಕೇಳತಾನೆ ಅವ?

**ಮುದುಕ**:— (ದರ್ಪದಿಂದ) ಕೇಳಲಿಲ್ಲ–ಅಂದರೆ, ಇವತ್ತು ಸಂಜೀಗೆ ಊಟ ಅಂತೂ ಇಲ್ಲವೆ ಇಲ್ಲ, ನಾಳಿನಿಂದ ಈ ಮನೆಯೊಳಗೆಯೆ ಅವನಿಗೆ ಊಟ ಇಲ್ಲ!

**ಅವ್ವ**:— (ಬೇಸರದ ದನಿಯಲ್ಲಿ) **ಅದನ್ನೂ ಮತ್ತೆ ನನ್ನ ಮುಂದೇ** ಹೇಳಿರಿ!

**ಮುದುಕ**:— (ಕೆರಳಿ) ಅಂದರೇನು ಗೋಡೆಯ ಮುಂದೆ ಹೇಳಲಿಯಾ? ನೀ ಯಾಕೆ ಮುಂದೆ ಬಂದು ನಿಂತಿರುವೆ ಹಾಗಾದರೆ?

**ಅವ್ವ**:— (ಉದಾಸೀನಳಂತೆ) ಇಷ್ಟು ವರ್ಷ ಆದುವು ಮದಿವಿ ಆಗಿ, ಇವತ್ತೇ ಮೊದಲನೆಯ ಸಾರಿ ಕೇಳಿದಿರಿ; ನಾ ಆದರೂ ಒಮ್ಮೆಲೆ ಏನು ಹೇಳಲಿ 'ಯಾಕೆ ಈ ಮನೆಯೊಳಗೆ ನಿಂತೀನಿ?' ಅಂತ? ಮಂದಿ ಆಡಿಕೊಂಡಾರು ಅಂಬೋ ಅಂಜಿಕೆಗಾಗಿ ನಾಳಿನದೊಂದು ಕಾಳಜಿ—

**ಮುದುಕ**:— (ಮಾತು ಮುಗಿಸಬೇಕೆಂಬ ಹಟದಿಂದ) ಏ, ನೀನು ಮುಂದಿನ್ನ ಮದಿವೆ ಆಗಿರುವೆಯೊ ಏನು ನನ್ನನ್ನೊ? ಪುಟ್ಯಾಗ ಹೇಳು ಅಂತ ಹೇಳ್ತೀನಿ—ಮತ್ತೆ ವಟ-ವಟ ಅದನ್ನೆ-ಅದನ್ನೆ ದನ ಮೆಲುಕಾಡಿಸುವ

ಹಾಗೆ— (ಇಷ್ಟರಲ್ಲಿ ಅಪ್ಪನು ಮುಖ ತಿರುಗಿಸಿ, ಸೆರಗಿನಿಂದ ಮುಚ್ಚಿಕೊಂಡು ಬಿಕ್ಕಲು ತುಸು ಪಶ್ಚಾತ್ತಾಪದಿಂದ) ಏ, ಹೇಳ್ತೀನಿ ಇಲ್ಲಿ, ಪೂರ್ತಿಯಾಗಿ ಕೇಳಿಕೊ. ಪುಟ್ಟ್ಯಾ ಇದ್ದಾನೆ, ಮತ್ತೆ ಈಹೊತ್ತಿನ ಆಚಾರ್ಯ ಇದ್ದಾನೆ. ಅವನ ಚಳಿಜ್ವರದ ಹೆದರಿಕೆ ಇಲ್ಲ. ಒಂದು ದಿವಸ ಬಿಟ್ಟು ಒಂದು ದಿವಸ ಬರುವುದು ಚಳಿಜ್ವರ; ಅಂತೂ ನಾಳೆ ಬರುವ ಹಾಗಿಲ್ಲ. (ಅಪ್ಪನು ಹಾಗೆಯೆ ತಲೆ ತಗ್ಗಿಸಿಕೊಂಡು ಒಳಗೆ ಹೊರಡಲು ತುಸು ಪ್ರೇಮದಿಂದ) ಮತ್ತೆ–ಮೇಲಿಂದ ಮೇಲೆ ಹೇಳುತ್ತಿದ್ದೆಯಲ್ಲ— ಒಂದು ಸೀರೆ ದಾನ ಮಾಡಬೇಕೊ ಏನು ಉಡಿ ತುಂಬಬೇಕೊ ಮುತ್ತೈದೆಗೆ ಅಂತ? ನಾಳೆಯೆ ಮುಗಿಸಿಬಿಡು ಅದನ್ನ— ಒಂದು ಸೀರೆ ತರತೀನಿ. (ತುಸು ಗಾಂಭೀರ್ಯದಿಂದ) ಆಯಿತು– ತರುವ ವೇಳೆಗೆ ನಿನಗೂ ಒಂದೆರಡು ತಂದೇ ಬಿಟ್ಟರಾಯಿತು.

**ಅಪ್ಪ**:— (ಎಲ್ಲ ತಡೆದುಕೊಂಡು ತಿರುಗಿ ನಿಂತು ಅಭಿಮಾನದ ದನಿಯಲ್ಲಿ) ಪುಟ್ಟ್ಯಾನ್ನ ಕಳುಹಿಸಿಕೊಡತೀನಿ– ನೀವೇನೊ ನಿಮ್ಮ ಮಗ ಏನೊ! ನನಗೇನು ನಿಮ್ಮ ಸೀರೆ ಬೇಡ–ಸಡಗರ ಬೇಡ: ಯಾರ ಕಡೆ ಹೊಂಟೀರಿ ಆ ಮೊಯ್ಯಾಲಿಗೇ ಇರಲಿ ಅದೆಲ್ಲ! (ಎಂದು ಗಾಳಿಯ ವೇಗದಿಂದ ಒಳಗೆ ಹೋಗುವಳು).

[ಮುದುಕನು, ಈ ಮಾತಿನಿಂದ ಒಮ್ಮೆಲೆ ಅಭಿಮಾನ ತುಂಬಿದವನಂತೆ, ಮೀಸೆಯ ಮೇಲೆ ಕೈಯನಾಡಿಸುತ್ತ ನಿಂತು, ಆ ಮೇಲೆ ಕೋಟನ್ನೂ ಹೊದ್ದುಕೊಂಡ ದೋತರ ವನ್ನೂ ಸರಿಮಾಡಿಕೊಂಡು, ಕಿಸೆಯೊಳಗಿನ ಗಡಿಯಾರವನ್ನು ತೆಗೆದು ವೇಳೆ ನೋಡಿ ಕೊಂಡು ಹೊರಡುವಷ್ಟರಲ್ಲಿ ಪುಟ್ಟು ಒಳಗಿನಿಂದ ಬಂದು— ]

**ಪುಟ್ಟು**:— (ಬಂದು ಕೈಮುಗಿದು) ಯಾರು? ಕೂತುಕೊಳ್ಳಿರಿ. ಯಾರು ಬೇಕು ನಿಮಗೆ? (ಎನುವಾಗ ತಂದೆಯು ತನ್ನ ಕಡೆ ಮುಖ ತಿರುಗಿಸಲು ಚಕಿತ ನಾದವನಂತೆ) ಯಾರ್–ನೀವ್– (ಎಂದು ಮಾತು ಸಾಲದೆ ತಡೆಯುವನು).

**ಮುದುಕ**:— (ಹಿರಿತನದಿಂದ) ಹುಚ್ಚುಮುಂಡೆಗಂಡ! 'ಯಾರು' ಅಂತ!

**ಪುಟ್ಟು**: - (ಹುಡುಗಾಟಿಕೆಯ ಹಟದಿಂದ) ಅಪ್ಪ ಹೇಳಿದಳು 'ಯಾರೊ ನಿಪ್ಪ ಕರೀತಾರ' ಅಂತ— ನನಗೂ ಈ ವೇಷ ನೋಡಿದ ಕೂಡಲೆ— (ಮೇಲಿನಂತೆ ತಡೆಯುವನು).

**ಮುದುಕ**:— ಸಾಕೊ! ಮುದುಕಿ ಆದಳು ಆಕೆ, ಕಣ್ಣು ಕಾಣಿಸೋದಿಲ್ಲ ಆಕೆಗೆ. ಹುಂ—ಈಗ ನಾನು ಹೊರಗೆ ಹೋಗತೀನಿ.. ನೀನು—ನೀನು ಸಂಜೆಯ ಊಟ ಮಾಡಬೇಡ.

**ಪುಟ್ಟು**:— ಇಲ್ಲ—ನೀವು ಬರುವತನಕ ಮಾಡುವುದಿಲ್ಲ.

**ಮುದುಕ**:— (ಸಿಟ್ಟಿನಿಂದ) ನಾನು ಬರುವ ತನಕ ಅಲ್ಲೊ! ನಾಳೆ ಮಧ್ಯಾಹ್ನದ ಊಟದ ವರೆಗೆ ನಿನಗೆ ಊಟ ಇಲ್ಲ.

**ಪುಟ್ಟು**:— (ಚಕಿತನಾಗಿ) ನಾಳೆ ಮಧ್ಯಾಹ್ನದ ವರೆಗೆ! ಅಂದರೆ ಈ ಹೊತ್ತು ರಾತ್ರಿ ನೀವು ಬರೋದೇ ಇಲ್ಲ—

**ಮುದುಕ**:— (ಕೆರಳಿ) ಉಪದ್ವ್ಯಾಪಿ! ನನ್ನ ಸಲುವಾಗಿ ಅಲ್ಲ. **ನಿನ್ನ** ಸಲುವಾಗಿ.. ಸಂಜೆಯ ಊಟ ಬೇಡ!

**ಪುಟ್ಟು**:— (ಚಕಿತನಾಗಿಯೆ) ನನ್ನ ಸಲುವಾಗಿಯೆ? (ನಗೆಯಿಂದ) ಚಳಿಜ್ವರ ಬಂದದ್ದು ನನಗಲ್ಲ. ಆ ವೆಂಕ— (ನಾಲಗೆ ಕಚ್ಚಿಕೊಂಡು) ವೆಂಕಟರಮಣಾಚಾರ್ಯರಿಗೆ.

**ಮುದುಕ**:— (ಹಟದಿಂದ) ಗೊತ್ತಿದೆ ನನಗೆ! ನಾಳೆ ಅವಿಧವಾಸನವಿ ಮಾಡಬೇಕು, ನೀನು ಮಾಡಬೇಕು—

**ಪುಟ್ಟು**:— (ನಡುವೆಯೆ) ನಾನು ಮಾಡಬೇಕು? ಅವಿಧವಾಸನವಿ ಅಂದರೆ ಮಂಗಸರದು ಅಲ್ಲವೆ?

**ಮುದುಕ**: (ಸಿಟ್ಟು ತಡೆಯುತ್ತ) ತಿರುಗಿ ವಾದಿಸಬೇಡ ನೀನು! ನಾಳೆ ಅವಿಧವಾಸನವಿ ಅಂತ ನಾನು ಹೇಳತೀನಿ. **ನೀನೆ** ಮಾಡಬೇಕು ಅಂತ ನಾನು ಹೇಳತೀನಿ. ಹೆಚ್ಚಿಗೆ ಮಾತಾಡಲಿಕ್ಕೆ ನನಗೆ ವೇಳೆ ಇಲ್ಲ. ಮೂರ್ಖನ್ನ ತಂದು! ಧರ್ಮಲಂಡ! (ಎಂದು ವಟಗುಟ್ಟುತ್ತ ಹೊರಡುವನು).

**ಪುಟ್ಟು**:— ನಾನೂ ಅದನ್ನೆ ಹೇಳಿದೆ. ಆ ಆಚಾರ್ಯರೂ ನನಗೆ 'ಧರ್ಮಲಂಡ' ಅಂತ ಬೈದರು; ನಾನು ಮಾಡಿದರೆ ಆ ಆಚಾರ್ಯರೂ ಒಪ್ಪಲಿಕ್ಕಿಲ್ಲ— (ತಂದೆಯು ಮಗನ ಕಡೆ ನೋಡದೆ ದರ್ಪದ ಹೆಜ್ಜೆಗಳಿಂದ ಹೊರಗೆ ಹೋಗುವನು. ಮಗನು ಬಾಗಿಲ-ವರೆಗೆ ನಡೆದು ಬರುತ್ತ ನೋಗಿನ ದೈನ್ಯದಿಂದ ಕೈಮುಗಿವು.) ಆದ್ದರಿಂದ ಕ್ಷಮಿಸಬೇಕು. (ಅದಕ್ಕೂ ಮೆಲ್ಲಗೆ) ಮನ್ನಿಸಬೇಕು (ಇನ್ನೂ ಮೆಲ್ಲಗೆ) ಕರುಣಿಸಬೇಕು, (ಹಣಕಿಕ್ಕಿ ಹೊರಗೆ ನೋಡಿ)

ಪೂಜ್ಯ ಪಿತೃಪಾದರಕ್ಷೆಂಗಳವರೆ—( ಒಮ್ಮೆಲೆ ತಡೆದು ) ಇದೇನು ಬಂದಿತು ಬೇರೆ! [ ಎನ್ನುತ್ತ ತುಸು ವಿಚಾರಮಗ್ನನಾಗಿ ಒಳಗೆ ಹೊರಡಬೇಕೆನುವಾಗ ಎದುರಿನಿಂದ, ಕಿವಿಗಳನ್ನು ಮುಚ್ಚುವಂತೆ ರುಮಾಲನ್ನು ಸುತ್ತಿಕೊಂಡು, ಶರ್ಟಿನಮೇಲೆ ಶಾಲನ್ನು ಹೊತ್ತುಕೊಂಡು ವೆಂಕಪ್ಪನು ಬರುವನು. ಅವನನ್ನು ನೋಡಿ ಕನಿಕರ ತೋರಿಸುತ್ತ ] ಪಾಪ! ಆಚಾರ್ಯರೆ, ಜ್ವರ ಹೇಗಿದೆ ಈಗ?

**ವೆಂಕಪ್ಪ.**—( ಅತ್ತಿತ್ತ ನೋಡಿ ಹಲ್ಲು ಕಟಿಯುತ್ತ, ಒಳದನಿಯಲ್ಲಿ ) ನಮ್ಮ ಮನೆಯೊಳಗೆ ಇದ್ದರೆ ಹೇಳುತ್ತಿದ್ದೆ ಯಾರಿಗೆ ಜ್ವರ, ಹೇಗೆ, ಅಂತ.

**ಪುಟ್ಟು:**—( ಅವನ ಕೈ ಹಿಡಿದು ನೋಡಿ ) ಈಗೇನು ಬಿಸಿ ಇಲ್ಲ—

**ವೆಂಕಪ್ಪ:**—ಬಿಸಿ ಇಲ್ಲ? ( ಸಿಡುಕಿನಿಂದ ) ಹೀಗೆಯೆ ಇನ್ನೊಂದು ತಾಸು ನಡೆದರೆ ಬಿಸಿ ಬಿಟ್ಟು, ತಣ್ಣಗೆ **ಸರ್ವಾಂಗ** ತಣ್ಣಗೆ ಆಗುವುದು.

**ಪುಟ್ಟು:**—ಬೆವರು ಬಿಟ್ಟರೆ ಹಾಗೆಯೆ ಆಗುವುದು.

**ವೆಂಕಪ್ಪ:**—( ಕೆರಳಿ ) ಸಾಕು! ತೆಗೆಯೊ! ಬೆವರು ಅಂತ! ಎಲ್ಲಿಂದ ಬರಬೇಕು ಬೆವರು? ಮುಂಜಾನಿನಿಂದ ಒಂದು ತುತ್ತು ಇಲ್ಲ ಹೊಟ್ಟೆಯೊಳಗೆ; ಬೆಂಕಿ ಬಿದ್ದಿದೆ ಬೆಂಕಿ! ಇದ್ದದ್ದು, ಇರಬೇಕಾದ್ದು ಎಲ್ಲ ಬೆವರು ಯಾವಾಗಲೊ ಉಗಿಯಾಗಿ ಹೋಗಿದೆ! ಬಿಸಿ ಇಲ್ಲ ಅಂತೆ! ಹೊಟ್ಟೆಯ ಮೇಲೆ ಕೈಯಿಟ್ಟು ನೋಡು, ನಿನ್ನ ಕೈ ಹಪ್ಪಳ ಆಗುವುದು, ಹಪ್ಪಳ.

**ಪುಟ್ಟು:**—ಇರಲಿ, ಕೂಡೊ! ಹಪ್ಪಳ, ಸಂಡಿಗೆ ಅಂತ ಶಬ್ದ ಅಂದು ಯಾಕೆ ನಮ್ಮ ನಮ್ಮ ಬಾಯಿಗೆ ನೀರು ಬಿಡಿಸಿಕೊಳ್ಳುವೆ.

**ವೆಂಕಪ್ಪ:**—( ಸಿಟ್ಟಿನಿಂದ ) ಮೈಯೊಳಗೆ ಒಂದು ಹನಿ ಬೆವರು ಇಲ್ಲ ಅಂತ ಹೇಳತೀನಿ, ನೀರು ಅಂತ ನೀರು! ಇನ್ನು ನನ್ನ ಶ್ರಾದ್ಧದೊಳಗೆ ಬಿಟ್ಟ ನೀರೇ ನನ್ನ ಬಾಯಿಗೆ ಬರಬೇಕು! ( ಎಂದು ರಭಸದಿಂದ ಕುರ್ಚಿಯನ್ನು ಅಪ್ಪಳಿಸಿ ಅದರಲ್ಲಿ ಕುಕ್ಕರಿಸುವನು ).

[ ಅಷ್ಟರಲ್ಲಿ ಒಳಗಿನಿಂದ 'ಅಯ್ಯೊ! ಯಾರು ಎಡವಿ ಬಿದ್ದರೊ ಏನು?' ಎನ್ನುತ್ತ ಕೈಯಲ್ಲಿ ಕಂದೀಲನ್ನು ಹಿಡಿದುಕೊಂಡು ಅವ್ವನು ಬರುವಳು. ಕೂಡಲೆ ಪುಟ್ಟು ಇನ್ನೊಂದು ಕುರ್ಚಿಯಲ್ಲಿ ಕುಳಿತುಕೊಂಡು ಒಂದು ಕೈಯಿಂದ ವೆಂಕಪ್ಪನ ಕೈಯನ್ನು ಹಿಡಿದು, ಇನ್ನೊಂದು ಕೈಯನ್ನು ಅವನ ಬೆನ್ನಿನ ಮೇಲಿಡುವನು. ಇಷ್ಟರಲ್ಲಿ ಅವ್ವನು ಕಂದೀಲನ್ನು ಕೆಳಗಿಟ್ಟು, ಮಗನನ್ನೂ ವೆಂಕಪ್ಪನನ್ನೂ ನೋಡಿ— ]

**ಅವ್ವ**:— (ಮಗನಿಗೆ) ಅವರ್ನ ಇಲ್ಲಿ ಕತ್ತಲೇಪಳಗೇ ನಡಿಸಿಕೊಂತಾ ತಂದು ಕೂಡಿಸಬೇಕ? ನನಗಾಪರೂ ಹೇಳಬೇಕಾಗಿತ್ತು?

**ಪುಟ್ಟು**:— ಹೊತ್ತಿಗೆ ಧರೆಪ್ಪ ಕಂದೀಲು ಹಚ್ಚಿಕೊಂಡು ಬರತಾನೆ ಅಂತ ಮಾಡಿದ್ದೆ.

**ಅವ್ವ**:— (ತಿರಸ್ಕಾರದಿಂದ) ಧರೆಪ್ಪ! ಅವರೂ ಹಾಂಗೇ! 'ಒಬ್ಬ ಚಲೋ ಆಳುಮನುಷ್ಯನನ್ನ ನೋಡಿರಿ' ಅಂದರೆ ಹೋದರೆ–ಧರೆಪ್ಪ ಬಂದರ–ಧರೆಪ್ಪ! ಆತನಾರೆ ಮನೇಪಳಗಿನ ಒಂದು ಕೆಲಸಕ್ಕೂ ಉಪಯೋಗ ಬೀಳೋದಿಲ್ಲ! ಇನತ್ತಂತೂ ಮನೆಪಳಗೇ ಇಲ್ಲ..ಆಚಾರ್ರಿಗೆ ಹ್ಯಾಂಗ ಇದೆ?

**ವೆಂಕಪ್ಪ**:— (ಮೆತ್ತಗಿನ ದನಿಯಲ್ಲಿ) ಇದೆ. ಅವ್ವನವರೆ, ಅಷ್ಟಕ್ಕಷ್ಟೆ ಇದೆ. ಹೇಳಿಕೇಳಿ ಚಳಿಜ್ವರ! ಈಗ ಅಂದರ ಇನ್ನೊಂದು ಗಳಿಗೆ ಇರೋದಿಲ್ಲ. ಅದಕೇ ನಾನು ಪುಟ್ಟುರಾಯರಿಗೆ ಹೇಳಿದೆ, '**ಒಲ್ಲೆ**' **ಅಂತೇ** ಹೇಳಿದೆ—

**ಪುಟ್ಟು**:— (ಚಕಿತನಾಗಿ) 'ಒಲ್ಲೆ' ಅಂತ—

**ವೆಂಕಪ್ಪ**:— (ನಡುವೆಯೆ ಅವನನ್ನು ತಡೆಯುತ್ತ) ಅಹುದು, ಪುಟ್ಟುರಾಯರೆ, ನೀವು ಹೆಚ್ಚಿಗೆ ಹಟ ಮಾಡಬಾರದು. (ಅವ್ವನಿಗೆ) ನೋಡಿರಿ, ತಾಯೀ, ಯಾರೊ ಡಾಕ್ಟರ್ರು ಹೇಳಿದರಂತೆ—ಇಂಥಾಜ್ವರ ಬಂದಾಗ ಹೊಟ್ಟೆಯೊಳಗೆ ಏನಾದರೂ ಹಗುರಾದ ಆಹಾರ ಇರಬೇಕು–ಅಂತ.. ನಮಗೇನು ಗೊತ್ತು ಈ ಡಾಕ್ಟರ ಜನರ ತಂತ್ರ ಎಲ್ಲ? ಈಗ ಪುಟ್ಟರಾಯರು ಹೇಳತಾರೆ—ಹಗುರಾದ ಆಹಾರ ಅಂದರೆ ಚಹ—ಅಂತ! 'ಚಹ! ನಾನು ಒಲ್ಲೆ!' ಅಂದೆ..ನಾವು ಹಳೆಯ ರೀತಿಯವರು—ನನಗೆ ಹೇಗೆ ಇದೆಲ್ಲ ಸರಿ ಹೋಗಬೇಕು ನೋಡಿರಿ? ಅದಕೇ ಪುಟ್ಟುರಾಯರು ಹಟ ಹಿಡಿಯಬಾರದು ಅಂತೀನಿ.

**ಪುಟ್ಟು**:— (**ಸಂದರ್ಭವನ್ನು ತಿಳಿದುಕೊಂಡು**) ಇಷ್ಟ ನಿಮ್ಮದೆ ಹಟ ಇದ್ದರೆ (ಉಸುರ್ಗರೆದು) ಬಿಡಿರಿ, ಆಚಾರ್ಯರೆ.

**ಅವ್ವ**:— (ಹಟದ ದನಿಯಲ್ಲಿ) ಅದ್ಹ್ಯಾಂಗ ಬಿಡತಾರೊ? ಡಾಕ್ಟರ್ರು

ಹೇಳಿಸರು ಅಂಪ ನ್ಯಾಲೆ ತಕ್ಕೊಳ್ಳಲಿಕ್ಕೆ ಏನು ಅಡ್ಡಿ? ಹೊಟ್ಟೀವಳಗ ಒಂದಿಷ್ಟು ಏನಾರೆ ಇಷ್ಟರೇನೆ ನೆಟ್ಟಗೆ. ಆವಾಗೇ ನಾನೇ ಆ ಮಾತು ಹೇಳಬೇಕು ಅಂತ ಮಾಡಿದ್ದೆ. ಆದರೆ 'ಹೆಂಗಸರು ದಡ್ಡರು, ಯಾವಾಗಲೂ ಬರಿಯ ತಿನ್ನು–ತಿನ್ನು ಅಂತಾರೆ' ಅಂತ ಬೈಸಗೀದಾರು ಅಂತ ಬಿಟ್ಟೆ. ಈಗ ಡಾಕ್ಟರ್ರೆ ಹೇಳಿದರು—

**ವೆಂಕಪ್ಪ**:— (ನಡುವೆಯೆ) ಛೆ–ಛೆ– ಯಾರು ಹೇಳಿಸರೂ ನನಗೆ ಹೇಗೆ ನಡೆದೀತು, ತಾಯೀ?

**ಅವ್ವ**:— (ಹಿರಿತನದ ದನಿಯಲ್ಲಿ) ನಡೆಯದೆ ಏನು ಬಿಡ್ರಿ, ಆಚಾರ್ರೆ! ನೀವೇನು 'ಬೇಕು' ಅಂತ ಕುಡೀತೀರಾ? 'ನಾ ನಾ' ಅಂತ ನಿಷ್ಠಾ ಮಾಡುವವರು ಬೇಕಾದ್ದ್ಮಾಡತಾರಂತೆ! ಪಾಪ! ಬಡ ಬ್ರಾಹ್ಮಣ, ಮೈಯೊಳಗ ನೆಟ್ಟಗಿಲ್ಲದಾಗ, ಅದೂ ಡಾಕ್ಟರು ಹೇಳಿದರು ಅಂತ ಒಂದೆರಡು ಚಮಚೆ ಕುಡಿದರೆ ಏನಾಯಿತು? (ಕಂದೀಲನ್ನು ಸರಿ ಮಾಡುವಾಗ ಕುಳಿತುಕೊಳ್ಳುತ್ತ) ನಾ ಅಂತಲೂ ಯಾವಾಗಲೂ ಅಂತಿರತೀನಿ ನೋಡಿರಿ, ಆಚಾರ್ರೆ; ನಾವು ಮಾಡೋದು ಮುಟ್ಟೋದು ಎಲ್ಲಾ ಸುಳ್ಳು; ಮನಸಿನಾಗ ಹ್ಯಾಂಗ ಇರತೀವೆಯೊ ಅದೇ ಗಟ್ಟಿ ಅಂತ..ಕೇಳಿರಿ ಬೇಕಾದರೆ ನಂ ಪುಟ್ಟ್ಯಾಗೆ..ಊಟಕ್ಕ ಅವರು ಇದ್ದರು ಅಂದರ—ಎಲ್ಲಿಟ್ಟಿರತಾನೊ ಏನೊ!– ತಟ್ಟನೆ ಒಂದು ಜನಿವಾರ ಹಾಕಿಕೊಳ್ಳತಾನೆ..ಅವರು ಇದ್ದಿದ್ದಿಲ್ಲ—ಕಾಲೊಳಗೆ ಬೂಟು ಹಾಕಿಕೊಳ್ಳೋದಷ್ಟೆ ಉಳಿದಿರತದೆ.. 'ಹಾಂಗ ಮಾಡಬಾರದು, ಪುಟ್ಯಾ; ಮುಂದಿಯ ಸಲುವಾಗಿ ಮಾಡೋದು ಎಷ್ಟು ದಿವಸ ಅಂತ ನಡೆದೀತು—ಮಾತಾಗಲಿ ಮನಸಾಗಲಿ ಮಾಡೋದಾಗಲಿ, ಮನುಷ್ಯಾಗ ತನ್ನದು ಅಂತ ಒಂದು ಗಟ್ಟಿ ಇರಬೇಕು—ನಿನಗ ಬ್ಯಾಡಾದರೆ ಬಿಟ್ಟು ಬಿಡು—ಒಂದು ದಿವಸ ಬೈದಾರು, ಎರಡು ದಿವಸ ಬೈದಾರು–' ಅವರಾದರೂ ಎಷ್ಟು ದಿವಸಅಂತ ಬೈದಾರು?— ಯಾಕರಿ– ಆಚಾರ್ರೆ?

**ವೆಂಕಪ್ಪ**:— (ಹುಸಿನಗೆಯಿಂದ) ಬೈಯೋದಂದರೇನು? ಹಿರಿಯರು– ಸಿಟ್ಟು ಮಾಡತಾರೆ– ಅವರಿಗೆ ಅಧಿಕಾರ ಇದೆ—ಅವರನ್ನ ಕೇಳಿಕೊಂಡು ಇದ್ದರೆ ಮನೆಗೆ ಶೋಭಾ, ಅನುಕೂಲ—

**ಅವ್ವ**:— (ನಡುವೆಯೆ) ಬಾಯಿಂದ ಆಡಿದಷ್ಟಕ್ಕೆ—ಆ ಮಾತು, ಆಚಾರ್ರೆ. ಇವನನಂತೂ ಬಿಡಿರಿ... ಅವರದೆ ಮಾತು ಹೇಳತೀನಿ.. ಮಾವನವರು ಇದ್ದಾಗ ನೋಡತಿದ್ದೆನಲ್ಲ?.. ಅವರಿಗೂ ಇವರಿಗೂ ಒಂದು ಹಾದಿ ಆಗತಿದ್ದಿಲ್ಲ— ಅಂದರೇನು, ಕಂಡರೆ ಸೇರತಿದ್ದಿಲ್ಲ ಅಂತಲ್ಲ. ಆದರೂ ಹುಡುಗರು ಹುಡುಗರ ಹಾಂಗೇ ಮಾಡೋವರು..ಅಷ್ಟ ಯಾಕೆ?... ಈಗ ಇವರದೆ—ಪೆನ್‌ಶನ್ ತಕ್ಕೊಂಡರೂ—ಹುಡುಗಾಟಿಕೆ ಹೋಗೇದ ಅಂತೀರೇನು ?

**ವೆಂಕಪ್ಪ**:— (ತಲೆ ಜಾಡಿಸಿ) ಹೋಗುವುದು ಹೇಗೆ? ಒಬ್ಬೊಬ್ಬರ ಸ್ವಭಾವ ಅದು.

**ಅವ್ವ**:— ಅದೇ ಹೇಳ್ತೀನಲ್ಲ—ಈಗ ನಿಮ್ಮದೆ ಮಾತು ನೋಡಿರಲ್ಲ? ಡಾಕ್ಟರ್ರು ಹೇಳಿದರೂ ಬ್ಯಾಡ ಅಂತೀರಿ ನೀವು..ಅದೇ, ನಮ್ಮ ಮನೆ ವಳಗ ಇವರು—ಕೂತಲ್ಲಿಯೆ ಎಷ್ಟು ಮೂಗು ಹಿಡಿದುಕೊಂಡರೂ ಒಮ್ಮೆ ಹೊರಗ ಹೋದರು ಅಂದರ— ಚಹ—ಸುಟ್ಟ—ಸುಡಗಾಡ ಎಲ್ಲಾ ಮಾಡಿ ಬರ್ತಾರೆ!

**ಪುಟ್ಟು**:— (ಸಿಟ್ಟು ಸಿಡಿದು ಬಿಟ್ಟು) ಹಂ—. ನೀನು ಆಚಾರ್ಯರಿಗೆಯೆ ಪುರಾಣ ಹೇಳುವ ಭರದೊಳಗೆ ಚಹದ ಮಾತು ಮರೆತೇ ಬಿಟ್ಟೆಯೇನೊ ಅಂತ ಮಾಡಿದ್ದೆ!

**ಅವ್ವ**:— (ಏಳುತ್ತ) ಮರೆಯಲಿ ಹ್ಯಾಂಗಪ? (ಎದ್ದು ವೆಂಕಪ್ಪನಿಗೆ) ಅಕೊ! ಅವನಿಗೂ ಬೇಕಾಗಿದೆ ನೋಡಿರಿ ನಿಮ್ಮ ಕೂಡ!

**ಪುಟ್ಟು**:— **ಇಂಥಾ** ಆಚಾರ್ಯರ ಅನುಕರಣ ಮಾಡಲಿಲ್ಲ ಅಂದರೆ ಯಾರ ಅನುಕರಣ ಮಾಡಬೇಕು?

**ಅವ್ವ**:— (ಮಗನಿಗೆ) ಅವರು ಮನೆಗೆ ಬಂದರು ಅಂದರ ಅವರ ಎದು ರಿಗೂ ಇದೇ ಮಾತು ಹೇಳೀಯಂತೆ! (ವೆಂಕಪ್ಪನಿಗೆ) ಇದೇ ನೋಡಿರಿ, ಆಚಾರ್ರೆ—

**ಪುಟ್ಟು**:— ಮತ್ತೆ ಉಪದೇಶದ ಭರದೊಳಗೆ ಮರೆಯುವೆ ನೀನು!

**ಅವ್ವ**:— ( ಮಾತನ್ನು ಮುಂದುವರಿಸುತ್ತ ) ಅವರಿಗೆ ಎಷ್ಟು ಅಂಜತಾನೆ ಅಷ್ಟು ನನ್ನ ಹೆದರಿಸಿಕೋತಾನೆ!

**ವೆಂಕಪ್ಪ**:— ಅವರೇನು ಹೆದರಿಸಿಕೋತಾರೆ? ತಾಯಿಯ ಕರುಳು! ಮಾಡತೀರಿ ನೀವೇ ಎಲ್ಲ. ಮಾತ್ಯದೇವೊ ಭವ ಅಂತ ಹೇಳಿದ್ದು ಸುಳ್ಳೇನು? ( ನಗೆಯಿಂದ ) ರಾಯರು ಬರುವದರೊಳಗೆಯ ಚಹ ಕುಡಿಯಬೇಕು ಅಂತ ಅವಸರ ನಡೆಸಿದ ಹಾಗೆ ಕಾಣತದೆ! ಹ ಹ!

**ಪುಟ್ಟು**:— ಕೇವಲ ನನ್ನದೆ ವಿಚಾರ ಹೇಳಿದಿರಿ ನೋಡಿರಿ, ಆಚಾರ್ಯರೆ. . ನಮ್ಮದೂ ನಿಮ್ಮದೂ ಮನಸ್ಸು ಅಷ್ಟು ಒಂದಾಗಿ ಬಿಟ್ಟಿದೆ. ( ಅವ್ವನಿಗೆ ) ಈಗಾದರೂ—

**ಅವ್ವ**:— ( ನಗುತ್ತ ) ಹೊರಟೆ-ಹೊರಟೆ. . ಅವರು ಬರೋ ಹೆದರಿಕೆ ನನಗಿಲ್ಲ, ನಿನಗ್ಯಾಕಿಷ್ಟು? ಚಹಾ ಆದ ಕೂಡಲೆ ಕರೀತಿನಿ, ಒಳಗೆ ಬರ್ರಿ, ಆಚಾರ್ರ್ರು ( ಹೋಗುವಳು )

[ ಒಂದೇ ನಿಮಿಷ ವೆಂಕಪ್ಪ ಮತ್ತು ಪುಟ್ಟು ಒಬ್ಬರನ್ನೊಬ್ಬರು ನೋಡುವರು. ಕೂಡಲೆ ವೆಂಕಪ್ಪನು ಯಾವುದೊ ಒಂದು ನಿರ್ಧಾರದಿಂದ ಒಮ್ಮೆಲೆ ರುಮಾಲನ್ನು ತೆಗೆದು ಮೇಜಿನ ಮೇಲೆ ಅಪ್ಪಳಿಸಿ— ]

**ವೆಂಕಪ್ಪ**:— ಥೂ! ಯಾಕೆ ಈ ಹೇಡಿಯ ಕೆಲಸ ಮಾಡಿದೆ ನಾನು ಅಂತೀನಿ!

**ಪುಟ್ಟು**:— ಆದರೊಳಗೇನಿದೆ ಬಿಡೊ! ಲೋಕೈಕವೀರನಾದಂಥಾ, ಒಬ್ಬನೇ ಒಬ್ಬ **ನರ**ನಾದಂಥಾ ಅರ್ಜುನನಿಗೂ ಒಂದು ವರ್ಷ ಸ್ತ್ರೈಣ ಹೊಂದಬೇಕಾಯಿತು! ನಿನಗೆ ಇದಿನ್ನೂ ಮೊದಲನೆಯ ದಿವಸ—

**ವೆಂಕಪ್ಪ**:— ( ನಡುವೆಯೆ ) ನಿನಗೆ ರೂಢಿ ಆಗಿರಬಹುದು. ನನಗಂತೂ ಹೇಸಿಕೆ ಆಗುವುದು ನನ್ನ ಹೇಡಿತನಕ್ಕೆ! ಒಂದು ಜನಿವಾರ, ಒಂದು ಚಂಡಿಕೆ! ಒಂದು ಎಳೆ ದಾರ, ಒಂದು ಎಳೆ ಕೂದಲು! ಇಷ್ಟರ ಸಲುವಾಗಿ—

**ಪುಟ್ಟು**:— ( ಅವನನ್ನು ತಡೆದು ) ಹಾಂ! ವಿನಾದರೂ ಮಾತಾಡಬೇಡ. ಒಂದು ಎಳೆ ಕೂದಲಂತೆ! ಅಲ್ರೊ, ಹುಚ್ಚಾ, ಒಂದು ಕೂದಲು

ಎಳೆದದ್ದಕ್ಕೆ ಕೌರವ–ಪಾಂಡವರ ಯುದ್ಧ ಆಗಿ, ಅಕ್ಷೌಪಧಿ ಲಕ್ಷೌಹಿಣಿ–(ಸುಧಾರಿಸಿಕೊಂಡು) ಅಲ್ಲ ಲಕ್ಷಾವಧಿ ಅಕ್ಷೌಹಿಣಿ—,

**ವೆಂಕಪ್ಪ**:— (ನಡುವೆಯೆ ಅಬ್ಬರಿಸಿ) ಸುಟ್ಟಿತೊ ನಿನ್ನ ಕ್ಷ ಕ್ಷ ಕ್ಷ ಕ್ಷ! ಕೌರವರಂತೆ! ಪಾಂಡವರಂತೆ! ಕತೆಯ ಮೇಲೆ ವಿಶ್ವಾಸವನಿಟ್ಟೇ ಸಂಸಾರ ಹಾಳು ಮಾಡಿಕೊಂಡೀವಿ ನಾವು! ತನಗೆ 'ಯುದ್ಧ ಬೇಡ' ಎನಿಸಿದಾಗ ಕೃಷ್ಣನ ಮುಂದೆ ಕೂಡಾ 'ಒಲ್ಲೆ' ಎನುವಷ್ಟು ಧೈರ್ಯ ಇದ್ದೀತು ಅರ್ಜುನನಿಗೆ! ನಿನಗೆ 'ಜನಿವಾರ ಬೇಡ' ಎನಿಸಿದಾಗ ಅಪ್ಪನ ಮುಂದೆ 'ಒಲ್ಲೆ' ಎನುವ ಧೈರ್ಯ ಇದೆಯೆ? ಸಾಕು—ನನಗಂತೂ ಈ ಮೋಸ ಸಾಕು. ಈ ಅಪಹಾಸ ಸಾಕು! ಹೇಳಿ ಬಿಡತೀನಿ ಇದ್ದ ಸಂಗತಿಯನೆಲ್ಲ (ಎಂದು ಮೈಮೇಲಿನ ಶಾಲು ತೆಗೆದಿಡುವನು). ಮಾತಾಡಿದ ಹಾಗೇ ಮಾಡಿ ನೀನು ವಿಧವಾ ವಿವಾಹ ಮಾಡಿಕೊಂಡೆ, ಒಳಿತು!–ಇಲ್ಲದಿದ್ದರೆ–

**ಪುಟ್ಟು**:- (ನಡುವೆಯೆ ತಿರಸ್ಕಾರದ ದನಿಯಲ್ಲಿ) ಅಲ್ಲೊ—ಜನಿವಾರ ಜಂಡಿಕೆ ಇಲ್ಲದೆ **ಮುಂದಿಯ** ಅಪ್ಪನ ಎದುರು ಊಟಕ್ಕ ಕೂಡ್ಸೋ ಧೈರ್ಯ ಇಲ್ಲದೆ ಉಪವಾಸ ಸಾಯತ್ತಾ ಬಿದ್ದುಕೊಂಡ ನೀನು ನನಗೆ ನನ್ನದೇ ಅಪ್ಪನ ಮಾತು 'ಮೀರು' ಅನುವೆಯಲ್ಲ!

**ವೆಂಕಪ್ಪ**:-- (ಪುಟಿದೆದ್ದು) ಯಾರಿಗೆ ಧೈರ್ಯ ಇಲ್ಲ? ಈಗ ನೋಡು–ಬೇಕಾದರೆ, ಬರಿಯ ತಲೆಯಿಂದ, ಜಂಡಿಕೆ ಇಲ್ಲದ ತಲೆಯಿಂದ, ಬ್ರಾಹ್ಮಣ್ಯದ ಬಾವುಟ ಇಲ್ಲದ ತಲೆಯಿಂದ ಹೀಗೇ ಹೊರಗೆಲ್ಲ ತಿರುಗಾಡತೀನಿ. . (ಕಂಕುಳಲ್ಲಿ ರುಮಾಲನ್ನಿಟ್ಟುಕೊಂಡು) ನನ್ನನ್ನ ನೋಡಿದರೆ, ಬೋಳುತಲೆಯವರಿಗೆ ಕೂಡ ರೋಮಾಂಚದಿಂದ ಜಂಡಿಕೆ ಎದ್ದಿರಬೇಕು—ಅಂತಹ ಧೈರ್ಯದಿಂದ ಬೇಕಾದಲ್ಲಿ ತಿರುಗಾಡತೀನಿಲ್ಲೊ—ನೋಡು–ಅಂದೆ! (ಹೊರಡುವಷ್ಟರಲ್ಲಿ)

**ಪುಟ್ಟು**:— (ಅಡ್ಡಗಟ್ಟಿ) ಹಂ—ಮುಂದಿಗೆ ರೋಮಾಂಚ ಏಳೋದು ಮುಂದಿನ ಮಾತು. ಸದ್ಯಕ್ಕೆ ನಿನ್ನ ತಲೆಗೆ ಮೊಳಕೆ ಒಡೆಯೋತನಕ, ವೃಂದಾವನದಲ್ಲಿ ತುಳಸೀದಳ ಕಾಣ್ಸೋತನಕ—(ಅವನನ್ನು ಒಳಕ್ಕೆ ಸರಿಸುತ್ತ) ಆಚಾರ್ಯಮಹಾಸ್ವಾಮೀ, ತಮ್ಮ ಸಮಾಧಿ ಇಲ್ಲಿಯೆ ಆಗತಕ್ಕದ್ದು.

**ವೆಂಕಪ್ಪ:**— (ಹೌಹಾರಿದ ರಭಸದಿಂದ) ಪುಟ್ಟೋ—ಪುಟ್ಟೋ—ತಡೆಯು ಬೇಡ ನನ್ನ . . ಇದೊ—ರುಮಾಲು ! ಅವನ್ನೀಗ ಕೃಷ್ಣಾಜಿನದ ಸುರುಳಿಯಂತೆ ಕಂಕುಳದಲ್ಲಿರಿಸಿರುವೆ. ಇದೊ—ಈ ಇನ್ನೊಂದು ಕೈಯಲ್ಲಿ ನಿನ್ನ ಪತ್ರಗಳು—ವಿಧವಾವಿವಾಹದ ಶಿಫಾರಸಪತ್ರ !—ನಿನ್ನ ಮೃತ್ಯುಪತ್ರ! ಸದ್ಯಕ್ಕೆ ನಾನು—ಶಾಪಾದಪಿ ಶರಾದಪಿ ಎಂಬ ಆವೇಶದಲ್ಲಿ— ( ಎರಡೂ ಕೈಗಳನ್ನು ಮೇಲಕ್ಕೆತ್ತಲು ತಲೆಯ ಮೇಲಿನ ಶಾಲು ಜಾರುವದು ).

**ಪುಟ್ಟು:**— ( ನಗೆಯಿಂದ ) ಮೊದಲು ಸೆರಗು ಸರಿಯಾಗಿ ಸುತ್ತಿಕೊ—ಯಾರೋ ಬಂದರು. ( ವೆಂಕಪ್ಪನು ತಟ್ಟನೆ ಶಾಲನ್ನು ತಲೆಯ ಮೇಲಿರಿಸುವನು) . . ಹ ಹ! ನನಗೆ ಗೊತ್ತಿದ ನಿನ್ನ ಹಾರುವ ಯುಕ್ತಿ !

**ವೆಂಕಪ್ಪ:**— ಹಾರುವ ಅಲ್ಲ, ಹಸಿದ ಹಾರುವ ನಾನು. ತಡೆಯು ಬೇಡ—ಇಲ್ಲವಾದರೆ ನಿಜವಾಗಿಯೆ ನೀನು ವಿಧವೆಯ ಗಂಡನಾಗುವೆ ! ( ಬಾಗಿಲ ಹತ್ತಿರ ಬರುವಷ್ಟರಲ್ಲಿ )

**ಪುಟ್ಟು:**— ( ಗಾಬರಿಯ ಧ್ವನಿಯಲ್ಲಿ ) ಅಯ್ಯೋ ! ಆಚಾರ್ಯರ !

( ಒಮ್ಮೆಲೆ ಬಂದು )

**ಅವ್ವ:**— ( ಗಾಬರಿಯಿಂದ ) ಏನು ? ಏನಾಯಿತು ಆಚಾರ್ಯರಿಗೆ ?
[ ಇಷ್ಟರಲ್ಲಿ ಪುಟ್ಟೂನ ಮೇಲೆ ಸಿಟ್ಟಿನಿಂದ ಏರಿಬರುವ ವೆಂಕಪ್ಪ , ಅವ್ವ ಬಂದುದನ್ನು ನೋಡಿ ಎತ್ತಿದ ಕೈಯನ್ನು ತಲೆಯ ಹಿಂದಿನಿಂದ ಸುತ್ತಿ ತಂದು ಚಪ್ಪಾಳೆ ತಟ್ಟಿ ]

**ವೆಂಕಪ್ಪ:**— ( ನಗೆಯಿಂದ) ಹೆದರಬೇಡಿರಿ, ತಾಯಿ . . ಸಾಯಂ ಸಮಯ . . ಸಂಧ್ಯಾವಂದನೆಯ ಸಮಯ . . ಒಂದೂ ದಿನ ಸಂಧ್ಯಾವಂದನೆಯನ್ನು ತಪ್ಪಿಸದ ನನಗೆ ರೂಢಿಯ ಬಲವಂತಿಕೆಯಿಂದ, ತಿಳಿಯುವ ಮುಂಚೆಯೆ, ಹೀಗಾಯಿತು . . ( ಪುಟ್ಟುಗೆ ) ನೋಡಿರಿ, ರೂಢಿ ಅಂದರೆ ಹೇಗೆ ಇರೋದು ? ದೇಹ ಅಸ್ವಸ್ಥ ಆದರೂ ಕೈ—ಬಾಯಿ ಚಟ ತಪ್ಪಿಲ್ಲ . . ಅಗಾಧ ! . . ಭಗವಂತನ ಸೃಷ್ಟಿ ಅಗಾಧ !

**ಅವ್ವ:**— ಅಯ್ಯ ! ಎಷ್ಟು ಹೆದರಿದ್ದೆನೆ ತಾಯಿ ! ಪಾಪ—ಮುಂಜಾನೆಯಿಂದ ಹೊಟ್ಟೆಗೆ ಒಂದು ತುತ್ತಿಲ್ಲ ಬ್ರಾಹ್ಮಣನಿಗೆ—

**ವೆಂಕಪ್ಪ:**— ( ನಡುವೆಯೆ) ಭಗವಂತನ ಸೃಷ್ಟಿ ಅಗಾಧ!

**ಅವ್ವ**:— ಚಹ ಆರೀತು–ಬ್ಯಾಗ, ಪುಟ್ಟೊ, ಆಚಾರ್ಯರ ಕೈಹಿಡಿದು ಕರೆದುಕೊಂಡು ಬಾ ( ಹೋಗುವಳು ).

**ಪುಟ್ಟು**:— ಒಂದೆ ( ಎನ್ನುತ್ತ ಕಂದೀಲನ್ನು ಹೊರಬಾಗಿಲಿನಲ್ಲಿ ಇಡುವನು. ವೆಂಕಪ್ಪನಿಗೆ ) ನೆರಳು ಮುಂದೆ ಮಾಡಿಕೊಂಡು ನಡೆ–ಒಳಗೆ–ಅಂದೆ ! ನಿನ್ನ ನೆರಳಿನ ಮೇಲೆ ಸಹ ವಿಶ್ವಾಸ ಇಲ್ಲ . . ( ವೆಂಕಪ್ಪ ತಿರುಗಿ ನೋಡಲು ) ನಿನ್ನ ನೆರಳು ಒಳಗೆ ಕಾಣಿಸತದೆ–ಎಚ್ಚರ— ( ವೆಂಕಪ್ಪನು ನಿರುಪಾಯನಾಗಿ ಒಳಗೆ ಹೊರಡುವಷ್ಟರಲ್ಲಿ— )

[ ಹೊರಗಿನಿಂದ 'ತಂದಿನಿರಿ, ಅಣ್ಣಾ ಅವರ' ಎನ್ನುತ್ತ ಓಡಿ ಬಂದು ಧರೆಪ್ಪನು ಕಂದೀಲನ್ನು ಎತ್ತುವಾಗ ಪುಟ್ಟು–ವೆಂಕಪ್ಪರನ್ನು ನೋಡಿ ಗಾಬರಿಯಾಗಿ, ಹುಚ್ಚಾಗಿ ]

**ಧರೆಪ್ಪ**:— ( ಕಂದೀಲನ್ನು ಕೆಳಗಿಡುತ್ತ ) ಬಂದಿನಿರಿ, ಅಣ್ಣಾ ಅವರ–ಅಂ–ಸಣ್ಣ ಅಣ್ಣಾ ಅವರ . .

**ಪುಟ್ಟು**:— ( ಚಕಿತನಾಗಿ ) ನಿನ್ನ ಯಾರು ಕರೆದರು ?

**ಧರೆಪ್ಪ**:— ಕರೆದಾಂಗ ಆಯಿತರಿ—

**ಪುಟ್ಟು**:— ( ನಡುವೆಯೆ ) ಅಂತೂ ಒಂಥಾಂಗೂ ಆಯಿತಲ್ಲ . . . . ಬಂದಿನ್ನು ಕೂಡು ಇಲ್ಲಿಯೆ—ನಾವು–ಅಂದರೆ ಆಚಾರ್ಯರು—ಚಹ ಕುಡಿದು ಬರೋತನಕ.

[ಪುಟ್ಟು–ವೆಂಕಪ್ಪ ಇಬ್ಬರೂ ಒಳಗೆ ಹೋಗುವರು]

[ ಧರೆಪ್ಪನು ಕೂಡಲೆ ಹಾಹಾರಿದವನಂತೆ ಒಮ್ಮೆ ಒಳಬಾಗಿಲಿಗೆ, ಒಮ್ಮೆ ಹೊರಬಾಗಿಲಿಗೆ ಧಾವಿಸುವನು. ಆಮೇಲೆ ಮೆಲ್ಲನೆ ಕಂದೀಲನ್ನೆತ್ತಿ ಹೊರಗೆ ಹೊರಡುವಷ್ಟರಲ್ಲಿ ಮತ್ತೆ ಅದನ್ನಿಟ್ಟು ಒಳಬಾಗಿಲಿಗೆ ಧಾವಸಿ ಬಂದು ಕೇಳಿದಂತೆ ಮಾಡಿ ಮತ್ತೆ ಹೊರಬಾಗಿಲಿಗೆ ಧಾವಿಸುವನು. ]

[ ಇಷ್ಟರಲ್ಲಿ ಹೊರಗಿನಿಂದ 'ಅಯ್ಯೊ ! ಧರ್‍ಯಾ !' ಎಂದು ಮುದುಕನು ಚೀರುವನು. ಅದನ್ನು ಕೇಳಿ ಧರೆಪ್ಪನು ಹೆದರಿಕೆಯಿಂದ ಒಳಬಾಗಿಲ ಕಡೆ ನೋಡುವಷ್ಟರಲ್ಲಿ ಪುಟ್ಟು ಲಗಬಗೆಯಿಂದ ಬಂದು._ ]

**ಪುಟ್ಟು**:— ಏನೊ ಅದು, ಧರೆಪ್ಪ ?

**ಧರೆಪ್ಪ**:— ( ಸಮೀಪ ಬಂದು ) ಕಾಲ–ರಿ, ಕಾಲು—ದೊಡ್ಡ ಅಣ್ಣಾ ಅವರ— ( ಅವ್ವ ಬಂದುದನ್ನು ನೋಡಿ ತಡೆಯುವನು )

**ಅವ್ವ**:— ಏನಾಯ್ತು? ಕಾಲ ಯಾರದು?

**ಧರೆಪ್ಪ**:— (ನಗೆಯು ಯತ್ನದಿಂದ) ಕಾಲ ನನ್ನದೇರಿ, ಯವ್ವಾ..ಹ– (ನರಳುವವನಂತೆ ಸುಧಾರಿಸಿಕೊಂಡು) ಹಂ. ಹಂ. ದೊಡ್ಡ ಅಣ್ಣಾ ಅವರ ದನಿ ಕೇಳಿಧಾಂಗ ಆತರಿ..ಅಲ್ಲಿ ಕುಂತಿದ್ದಿಸಿರಿ ನಾ..ದನಿ ಕೇಳಿದವನೆ ಗಬಕ್ಕನೆ ಓಡಿ ಬಾಗಿಲಿಗೆ ಬರೋವುಟ ಕಾಲು ಚಳಕ ಅಂತರಿ—

**ಅವ್ವ**:— ಅಯ್ಯ! ನನಗೂ ಅವರ್ದೇ ದನಿ ಕೇಳಿಸಿಧಾಂಗ ಆಯ್ತು– ಏನಾಯ್ತೊ ಅಂತ ಬಂದೆ—ಹೊರಗೆ ಹೋದರೂ ಮನೀಅವರಿಗೆ ಇವರ ಕಾಳಜಿ ಬಿಟ್ಟದ್ದಲ್ಲ—(ಎನುತ್ತ ಒಳಗೆ ಹೋಗುವಳು).

**ಪುಟ್ಟು**:— (ಸಂಶಯದಿಂದ ಧರೆಪ್ಪನನ್ನು ನೋಡುತ್ತ) ಏನೊ? ಆದದ್ದಾದರೂ ಏನು?

**ಧರೆಪ್ಪ**:— (ಹತ್ತಿರ ಬಂದು, ಮೆಲ್ಲಗೆ) ದೊಡ್ಡ ಅಣ್ಣಾ ಅವರದೇರಿ—ಕಾಲ.

**ಪುಟ್ಟು**:— (ಅಸಹನೆಯಿಂದ) ಹೌದೊ ಅವರ ಕಾಲ ಮುಗೀತು ಈಗ..

**ಧರೆಪ್ಪ**:— ಮುಗಿದಿಲ್ಲರಿ, ಯಪ.. ಮುರಿದೇತಿ – ಅಲ್ಲಿ – (ಕಂದೀಲ ನ್ನೆತ್ತಿಕೊಂಡು ಹೊರಡುವನು)

**ಪುಟ್ಟು**:— (ಚಕಿತನಾಗಿ) ಏನು? (ತಡೆಯುವನು)

**ವೆಂಕಪ್ಪ**:— (ಬಂದು) ಅಲ್ಲೋಲಕಲ್ಲೋಲ! ಒಳಗೆ ಚಹದ ಅಲ್ಲೋಲಕಲ್ಲೋಲ—ಹೊರಗೆ ಕಂದೀಲಿನ ಅಲ್ಲೋಲಕಲ್ಲೋಲ—

**ಧರೆಪ್ಪ**:— (ಮೆಲ್ಲಗೆ) ಕಲ್ಲ ಅಲ್ಲರಿ ಹೊರಗ.. ಪಾವಟಿಗೆ—ಆ ತ್ವಾಟದ ಬಂಗಲೇದಾಗಿನ ಪಾವಟಿಗೆ ಎಡವಿ– (ಪುಟ್ಟು ಕಂದೀಲನ್ನು ತೆಗೆದುಕೊಂಡು ಹೊರಬಾಗಿಲಿಗೆ ಬರುತ್ತಿರುವುದನ್ನು ನೋಡಿ, ಗಾಂಭೀರ್ಯದಿಂದ ನಡೆದು ಬಂದು ನಿಲ್ಲುವನು. ಉಳಿದಿಬ್ಬರೂ ಮುಗ್ಧರಾಗಿ ಅವನನ್ನು ನೋಡಲು–)

**ಪುಟ್ಟು**:— (ಆಕಾಶವನ್ನು ದಿಟ್ಟಿಸುತ್ತ) ನಿಜ! ಕೆಟ್ಟ ಕಾಲ! ಹಗಲೂ ಅಲ್ಲ, ರಾತ್ರಿಯೂ ಅಲ್ಲ, ಇಂತಹ ಸಂಧ್ಯಾಕಾಲ! ಮುಪ್ಪೂ ಅಲ್ಲ, ಹರೆಯೂ ಅಲ್ಲ ಇಂತಹ ಸಂಧ್ಯಾಕಾಲ! ಕೊನೆಗೆ ಮುರಿಯಿತು.. ಸಂಧ್ಯಾ ಸರಿಯಿತು, ಕಾಲ ಮುರಿಯಿತು.

**ಅವ್ವ**:— (ಒಮ್ಮೆಲೆ ಬಂದು) ಪಾವಟಿಗೆ ಯಾರು ಎಡವಿದರು? (ಧರೆಪ್ಪ ನಿಗೆ) ಏನು ಹೇಳತಿದ್ದೆಯೊ? (ನಿರುತ್ತರ) ಬೊಗಳೊ! ನಿನ್ನ ಮನೆ ಹಾಳಾ ಗಲಿ! ಯಾರ ಬಂಗಲೇಕ್ಕ ಯಾರು ಹೋಗಿದ್ದರು?

[ಇಷ್ಟರಲ್ಲಿ 'ಧರ್ಯಾ! ಏ ಧರ್ಯಾ!' ಎಂದು ಚೀರುತ್ತ ಮುದುಕನು ಕುಂಟುತ್ತ ಬಾಗಿಲಿಗೆ ಬಂದು–]

**ಮುದುಕ**:— (ಸಿಟ್ಟಿನಿಂದ) ಒಂದಿಷ್ಟು ಕಂದೀಲು ತೋರಿಸು ಅಂದರೆ– [ಹೆಂಡತಿಯನ್ನು ನೋಡಿ ಮಾತು ತಡೆದು ನೋವಿನಿಂದ ನರಳುತ್ತ ಕುರ್ಚಿಯಲ್ಲಿ ಬಿದ್ದುಕೊಳ್ಳುವನು)

(ಧರೆಪ್ಪ ಕಂದೀಲು ಹಿಡಿದು ಬಾಗಿಲಿಗೆ ಬಂದು, ಕೂಡಲೆ ಹೊರಗೆ ಜಾರುವನು)

**ವೆಂಕಪ್ಪ**:— (ಅವನನ್ನು ಕುಳ್ಳಿರಿಸುತ್ತ) ಪೆಟ್ಟು ಬಹಾಳ ತಾಕಿತೊ ಏನೊ? ಯಾವ ಕಾಲ, ರಾಯರೆ, ಪಾವಟಿಗೆ ಎಡವಿದ್ದು?

**ಮುದುಕ**:— (ಆಶ್ಚರ್ಯದ ದನಿಯಲ್ಲಿ) ಪಾವಟಿಗೆ! ನಿಮಗೆ ಯಾರು ಹೇಳಿದರು–ಅಂದರ–ಅಲ್ಲ–ಅಲ್ಲಿ ಪಾವಟಿಗೀನೇ ಇಲ್ಲ—ಅದಕ್ಕಂಡೆ.... (ನರಳುತ್ತ) ಹಾಳು ಗುಡಿ! ಅಲ್ಲಿಯ ಕಲ್ಲು! ನಾರಾಯಣಾ, ನರಹರೀ— ಯಾಕೆ ನನಗೆ ಗುಡಿಗೆ ಹೋಗುವ ಬುದ್ಧೀ ಕೊಟ್ಟೆ? (ಉಸುರ್ಗರೆಯುವನು)

**ವೆಂಕಪ್ಪ**:— (ಕನಿಕರ ತೋರಿಸುತ್ತ) ಬಹಳ ಪೆಟ್ಟು ತಾಕಿತೇನೊ!

**ಮುದುಕ**:— (ನರಳುತ್ತ) ಆದಿರಲಿ.. ನಿಮ್ಮ ಜ್ವರ ಹೇಗಿದೆ?

**ವೆಂಕಪ್ಪ**:— ನನಗಿ–ನನಗೆ ಸಾಕಷ್ಟು ಬೆವರು ಬಿಟ್ಟಿತು, ರಾಯರೆ.

**ಪುಟ್ಟು**:— ತಲೆ ಮುಚ್ಚಿಕೊಳ್ಳಿರಿ, ಆಚಾರ್ಯರೆ, ಗಾಳಿ ತಾಕೀತು!

**ಮುದುಕ**:— (ಮಗನಿಗೆ) ನಿನ್ನ ತಲೆ ಗಾಳಿಗೆ ಹಾರಿಯೆ ಹೋಯಿ ತೇನೊ! (ಗದ್ದರಿಸಿ) ನಿಂತೀ ಏನು?.. ನನ್ನ ಕಾಲ ಇಲ್ಲಿ ನೋವಾಗತಾ ಇದೆ—ಶುದ್ಧ ಅಪಲಕ್ಷಣ! ಒಂದು ಹಿರಿಯರ ಸೇವಾನ! ಒಂದು ದೇವರ ಸೇವಾನ! ಕಡೆಗೆ ಒಂದು ಸಂಧ್ಯಾವಂದನೆ–

**ವೆಂಕಪ್ಪ**:— ನಾನೂ ಅದನ್ನೆ ಹೇಳತಿದ್ದೆ ರಾಯರಿಗೆ—

**ಅವ್ವ**:— ಅಯ್ಯ, ಆಚಾರ್ಯರ! ನೀವೂ ಮೋಸ ಹೋದರ್‍ಯೊ

ಏನೊ! (ಸಾಂತ್ವನದ ದನಿಯಲ್ಲಿ) ಮಗೂ, ಪುಟ್ಟೂ, ನೀ ಮಾತ್ರ ಸಂಧ್ಯಾನ ಮಾಡಬೇಡಪ—

**ಮುದುಕ**:— ಏ— (ಎಂದು ಗದ್ದರಿಸುವಷ್ಟರಲ್ಲಿ)

**ಅವ್ವ**:— (ನಡುವೆಯೆ) ಅಯ್ಯ! ನಾ ಏನು ದೇವರ ಮೂರ್ತಿ ಅಂತ ತಿಳಿದಿರ್‍ಯಾ ಏನು, ನನ್ನ ಮುಂದ ಒದರಲಿಕ್ಕೆ? ನಿಂ ಸಂಧ್ಯಾ ಬ್ಯಾಡ, **ನಿಂ ಕಾಲ ಮುರಿಯೋದೂ ಬ್ಯಾಡ!**

**ಮುದುಕ**:— (ತಿಳಿಹಿಸುವ ಹಟದಿಂದ) ಏ— ನನ್ನ ಕಾಲ ಮುರಿದದ್ದು—

**ಅವ್ವ**:— (ನಡುವೆಯೆ) ಆಕೆಯ ಹೆಸರು ನನ್ನ ಬಾಯಿಯೊಳಗ ಬ್ಯಾಡ, ದೇವರ ಹೆಸರು ನಿಂ ಬಾಯಿಯೊಳಗ ಬ್ಯಾಡ! (ಸಿಟ್ಟಿನಿಂದ ಹೋಗುವಳು)

**ಮುದುಕ**:—(ತಡೆಯದೆ) ಏ— ಹೇಳ್ತೀನಿ ಕೇಳಿಲ್ಲ— (ಎಂದು ಒಮ್ಮೆಲೆ ಎದ್ದು ಕೂಡಲೆ ನೋವಿನಿಂದ) ಅಯ್ಯೊ— ನನ್ನ ಕಾಲ— (ಎಂದು ಕುರ್ಚಿಯಲ್ಲಿ ಕುಕ್ಕರಿಸುವನು)

**ಪುಟ್ಟು**:— (ಓಡಿ ಬಂದು) ಯಾವುದು? ಮುರೀತೇನು? (ಎಂದು ಒಂದು ಕಾಲನ್ನು ಹಿಡಿಯುವನು)

**ವೆಂಕಪ್ಪ**:— (ಓಡಿಬಂದು) ಯಾವುದು? ಮುಗೀತೇನು? (ಎಂದು ಇನ್ನೊಂದು ಕಾಲನ್ನು ಹಿಡಿಯುವನು)

[ಹೊರಗಿನಿಂದ ಧರೆಪ್ಪ ಕಂದೀಲು ಹಿಡಿದುಕೊಂಡು ಬಂದು]

**ಧರೆಪ್ಪ**:— (ಕಂದೀಲನ್ನೆತ್ತಿ ನೋಡುತ್ತ) ಮುಗಿದೇತರಿ ಇದರ ಕಾಲ, ಅಣ್ಣಾಅವರ; ಒಳಗ ಇಟ್ಟರ ಹೋರತೈತಿ, ಹೊರಗ ಒಯ್ದರ ಆರತೈತಿ— (ಮೂವರನ್ನು ನೋಡಿ) ಎಲೆ!

[ಎಂದು ದಂಗುಪಡೆದು ನಿಲ್ಲುವನು]

[ತಟ್ಟನೆ ಕಂದೀಲು ಅವನ ಕೈಯಿಂದ ಜಾರಿ ಒಡೆಯುವ ಸದ್ದಿಗೆ]

[ತೆರೆ]

---

